ಜನಪ್ರಿಯ ಗ್ರಂಥಮಾಲೆ
೩೧೭

# ಮೋಕ್ಷಗುಂಡಂ ವಿಶ್ವೇಶ್ವರಯ್ಯ

ಶಿವಕುಮಾರ ಪಾಟೀಲ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಮಾರ್ಚ, ೧೯೭೧

ಉಪನ್ಯಾಸ ಗ್ರಂಥಮಾಲೆ

೩೧೭

# ಮೋಕ್ಷಗುಂಡಂ ವಿಶ್ವೇಶ್ವರಯ್ಯ

ಶಿವಕುಮಾರ ಪಾಟೀಲ
ಎಂ.ಎ., ಬಿ.ಎಡ್.



ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಮಾರ್ಚ, ೧೯೮೧

ಪ್ರಕಾಶಕರು :

**ಸಿ. ಎಸ್. ಕಣವಿ**
ನಿರ್ದೇಶಕರು, ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೫೮೦ ೦೦೩

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು
ಮಾರ್ಚ್, ೧೯೮೧



ಬೆಲೆ : ೫೦ ಪೈಸೆ

ಮುದ್ರಕರು :

**ಜಿ. ಬಿ. ಮನ್ವಾಚಾರ**
ಸಹಾಯಕ ನಿರ್ದೇಶಕರು
ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ
ಧಾರವಾಡ–೫೮೦ ೦೦೩

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿಈ'ಉಪನ್ಯಾಸ ಗ್ರಂಥಮಾಲೆ'ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೧೬ ಪುಸ್ತಕಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಎಸ್. ಎಸ್. ಒಡೆಯರ
ಕುಲಪತಿಗಳು

# ಅರಿಕೆ

ಬಳ್ಳಾರಿ ಜಿಲ್ಲೆಯ ಅಂಕಸಮುದ್ರದಲ್ಲಿ ಕರ್ನಾಟಕ ವಿಶ್ವ ವಿದ್ಯಾಲಯದ ಪ್ರಸಾರಾಂಗದವತಿಯಿಂದ ಏರ್ಪಡಿಸಿದ ಉಪನ್ಯಾಸ ಶಿಬಿರದಲ್ಲಿ ಭಾಗವಹಿಸುವ ಸದವಕಾಶ ನನಗೆ ಲಭಿಸಿದ್ದಿತು. ದಿನಾಂಕ ೩–೪–೧೯೭೯ ರಂದು 'ಮೋಕ್ಷಗುಂಡಂ ವಿಶ್ವೇಶ್ವರಯ್ಯ' ಎಂಬ ವಿಷಯದ ಮೇಲೆ ನಾನು ಅಲ್ಲಿ ಉಪನ್ಯಾಸಮಾಡಿದೆ. ಆ ಉಪನ್ಯಾಸದ ವಿಸ್ತೃತ ರೂಪವೇ ಇಂದು ಈ ಚಿಕ್ಕ ಹೊತ್ತಿಗೆ ಯಾಗಿ ಹೊರಬರುತ್ತಿದೆ.

ಮೋಕ್ಷಗುಂಡಂ ವಿಶ್ವೇಶ್ವರಯ್ಯನವರದು ಬಹುಮುಖ ವ್ಯಕ್ತಿತ್ವ. ಎಲ್ಲ ಕ್ಷೇತ್ರಗಳಲ್ಲಿಯೂ ಅವರು ಮಾಡಿದ ಮಹ ತ್ಕಾರ್ಯಗಳು ಅಪಾರ, ಅನುಪಮ, ಅನ್ಯಾದೃಶ ! ಅಂಥವರ ಬಗ್ಗೆ ಈ ಸಣ್ಣ ಪುಸ್ತಕದಲ್ಲಿ ಬರೆಯುವದೆಂದರೆ, ಮಹಾಸಾಗರ ವನ್ನು ತಂದು ಒಂದು ತಂಬಿಗೆಯಲ್ಲಿ ತುಂಬಿದಂತೆಯೇ ಸರಿ ! ಆದರೂ ಸಾಧ್ಯವಿದ್ದಷ್ಟು ಅವರ ಕಾರ್ಯಕ್ಷೇತ್ರಗಳನ್ನು ಸಂದರ್ಶಿಸಿ, ಅವರ ಬದುಕಿನ ಒಂದು ಸಮಗ್ರ ಚಿತ್ರವನ್ನು ಕೊಡಲು ಈ ಪುಸ್ತಕ ದಲ್ಲಿ ಯತ್ನಿಸಲಾಗಿದೆ.

ವಿಶ್ವೇಶ್ವರಯ್ಯನವರ ಬಗ್ಗೆ ಹೆಚ್ಚಿನ ಅಧ್ಯಯನಕ್ಕಾಗಿ ಪರೋಕ್ಷವಾಗಿ ಪ್ರೋತ್ಸಾಹಿಸಿದವರೆಂದರೆ ನನ್ನ ಆತ್ಮೀಯ ವಿದ್ಯಾರ್ಥಿಗಳು. ಅವರನ್ನು ನಾನು ಇಲ್ಲಿ ನೆನೆಯದಿರಲಾರೆ.

ವಿಷಯ ಸಂಗ್ರಹದಲ್ಲಿ ಸಹಾಯಮಾಡಿ ಸಹಕರಿಸಿದ ನಮ್ಮ ಮುಖ್ಯಾಧ್ಯಾಪಕರಾದ ಶ್ರೀ ಪಿ. ಜಿ. ಮಠದ ಅವರನ್ನೂ, ನನ್ನ ಸಹೋದ್ಯೋಗಿ ಬಂಧುಗಳನ್ನೂ ನಾನು ಇಲ್ಲಿ ಸ್ಮರಿಸುವೆನು. ಹಸ್ತ ಪ್ರತಿಯನ್ನು ಓದಿ, ಅನೇಕ ಸಲಹೆ–ಸೂಚನೆಗಳನ್ನಿತ್ತು, ಉಪನ್ಯಾಸಕ್ಕೆ ಪ್ರೋತ್ಸಾಹಿಸಿದ ನನ್ನ ವಿದ್ಯಾಗುರುಗಳಾದ ಡಾ. ಸಂಗಮೇಶ ಬಿರಾದಾರ ಮತ್ತು ಪ್ರಾ. ಜ್ಯೋತಿ ಹೊಸೂರ ಅವರಿಗೆ ನಾನು ಚಿರಋಣಿ. ಎಲ್ಲಕ್ಕೂ ಮಿಗಿಲಾಗಿ ಉಪನ್ಯಾಸಕ್ಕೆ ಅವಕಾಶ ವನ್ನಿತ್ತು, ಅದನ್ನೇ ಪುಸ್ತಕರೂಪದಲ್ಲಿ ಪ್ರಕಟಿಸುವ ಕೃಪೆಮಾಡಿದ ಪ್ರಸಾರಾಂಗದ ನಿರ್ದೇಶಕರಾದ ಶ್ರೀ ಚೆನ್ನವೀರ ಕಣವಿಯವರಿಗೂ, ಉಪನಿರ್ದೇಶಕರಾದ ಶ್ರೀ ಎಸ್. ಬಿ. ನಾಯಕ ಅವರಿಗೂ ಹಾಗೂ ಸಹಾಯಕ ನಿರ್ದೇಶಕರಾದ ಶ್ರೀ ಎಲ್. ಎಮ್. ಗುಡ್ಡೀನ ಅವರಿಗೂ ನಾನು ಉಪಕೃತ.

ಜಮಖಂಡಿ                ಶಿವಕುಮಾರ ಪಾಟೀಲ

೨೩–೧೨–೧೯೮೦

# ಪರಿವಿಡಿ

# ೧. ಪೀಠಿಕೆ

ಕನ್ನಡಮ್ಮನ ಪುತ್ರರು ಕವಿಗಳಾಗಿ, ಕಲಾವಿದರಾಗಿ, ತತ್ವಜ್ಞಾನಿಗಳಾಗಿ, ವಾಸ್ತುಶಿಲ್ಪಿವರೇಣ್ಯರಾಗಿ ಕನ್ನಡದ ಹಿರಿಮೆ ಗರಿಮೆಗಳನ್ನು ಹೆಚ್ಚಿಸಿ, ಕರ್ನಾಟಕ ಮಾತೆಯು ಕೀರ್ತಿವೈಜಯಂತಿಯನ್ನು ಬಾನೆತ್ತರಕ್ಕೆ ಹಾರಿಸಿ ದಿಗ್ದಿಗಂತಗಳಲ್ಲಿ ವ್ಯಾಪಿಸುವಂತೆ ಮಾಡಿದ್ದಾರೆ. ಇಂತಹ ಮಹಾಮಹಿಮರನೇಕರಲ್ಲಿ 'ಭಾರತರತ್ನ' ಮೋಕ್ಷಗುಂಡಂ ವಿಶ್ವೇಶ್ವರಯ್ಯನವರೂ ಒಬ್ಬರು. ಅವರು ಜಗದ್ವಿಖ್ಯಾತ ವಾಸ್ತುಶಿಲ್ಪಿವರೇಣ್ಯರಾಗಿ, ನಿಸ್ಪೃಹ ವ್ಯಕ್ತಿಗಳಾಗಿ ಬಾಳಿ ಬೆಳಗಿದರು. ಒಂದು ನಿಮಿಷವನ್ನೂ ವ್ಯರ್ಥವ್ಯಯಮಾಡದೆ, ತನ್ನ ತನು–ಮನ–ಧನಗಳನ್ನು ದೇಶಕ್ಕಾಗಿ ಮುಡಿಪಾಗಿಟ್ಟು ದುಡಿದ ವ್ಯಕ್ತಿ ವಿಶ್ವೇಶ್ವರಯ್ಯನವರು. ಯಾವಾಗಲೂ ಅವರ ತಲೆಯಲ್ಲಿ ಹೊಸ ಹೊಸ ಯೋಚನೆ, ಹೊಸ ಹೊಸ ಯೋಜನೆಗಳೇ ತುಂಬಿರುತ್ತಿದ್ದವು. ಕರ್ನಾಟಕದ ಮೇಲ್ಮೆಗಾಗಿ, ಭಾರತದ ಏಳಿಗೆಗಾಗಿ ಅಹರ್ನಿಶಿ ದುಡಿದ ಈ ವ್ಯಕ್ತಿ ಮಾಡಿದ ಕಾರ್ಯಗಳು ಅಪಾರ, ಅನುಪಮ; ಅದ್ವಿತೀಯ, ಅನ್ಯಾದೃಶ.

ವ್ಯರ್ಥವಾಗಿ ಹರಿದು ಸಾಗರವನ್ನು ಸೇರುತ್ತಿದ್ದ ಕಾವೇರಿ ನದಿಗೆ ಕನ್ನಂಬಾಡಿಯ ಹತ್ತಿರ 'ಕೃಷ್ಣರಾಜಸಾಗರ' ನೀರಾಕರವನ್ನು ನಿರ್ಮಿಸಿ ಬೆಂಗಾಡಾಗಿದ್ದ ಬರಡು ಭೂಮಿಯನ್ನು ನಂದನವನ

ವನ್ನಾಗಿ ಮಾಡಿದರು. ಕಬ್ಬಿಣ–ಉಕ್ಕು ದುರ್ಲಭವಾಗಿದ್ದ ಆಗಿನ ಕಾಲದಲ್ಲಿ ಭದ್ರಾವತಿಯಲ್ಲಿ ಕಬ್ಬಿಣ–ಉಕ್ಕಿನ ಕಾರ್ಖಾನೆಯನ್ನು ಸ್ಥಾಪಿಸಿದರು. ಬೆಂಗಳೂರು, ಮೈಸೂರು ನಗರಗಳನ್ನು ಅಭಿವೃದ್ಧಿಪಡಿಸಿ ಪ್ರೇಕ್ಷಣೀಯ ಸ್ಥಳಗಳನ್ನಾಗಿಸಿದರು. ಮೂಸಾ ಮತ್ತು ಈಸಿ ನದಿಗಳಿಗೆ ಅಣೆಕಟ್ಟುಗಳನ್ನು ಕಟ್ಟಿಸಿ. ಹೈದರಾಬಾದ ನಗರವನ್ನು ಸಾವಿನ ದವಡೆಯಿಂದ ತಪ್ಪಿಸಿ. ನಗರ ಮಧ್ಯದಲ್ಲಿ ನದಿಯ ಇಕ್ಕೆಲಗಳಲ್ಲಿ ಸುಂದರವಾದ ಪುಷ್ಪೋದ್ಯಾನಗಳನ್ನು ನಿರ್ಮಿಸಿದರು. ಕೃಷಿ. ಕೈಗಾರಿಕೆ. ವಾಣಿಜ್ಯ ಮತ್ತು ವಿದ್ಯಾ ಕ್ಷೇತ್ರಗಳಲ್ಲಿ ಅಭಿವೃದ್ಧಿಯನ್ನು ಸಾಧಿಸಿದರು. ಹೀಗೆ ಅವರು ಮಾಡಿದ ಕಾರ್ಯಗಳು ಒಂದಲ್ಲ. ಎರಡಲ್ಲ, ಸಾವಿರಾರು ! ಒಟ್ಟಿನಲ್ಲಿ. ಅದು ಮುಟ್ಟದ ಸೊಪ್ಪಿಲ್ಲ ವಿಶ್ವೇಶ್ವರಯ್ಯನವರು ಮಾಡದ ಕಾರ್ಯಗಳಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು.

"ವಿಭೂತಿಪುರುಷ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ರಾಷ್ಟ್ರದ ಉತ್ಕರ್ಷೆಗಾಗಿ ಸತತವಾಗಿ ಶ್ರಮಿಸಿ ಸಾಫಲ್ಯಪಡೆದ ಮಹಾಚೇತನ. ಅವರ ಜೀವನ ಸಾಧನೆ ನಮ್ಮ ಬದುಕಿಗೆ ಪ್ರೇರಕಶಕ್ತಿಯಾಗಬಲ್ಲದು." ಎಂದು ಮಾವಿನಕೆರೆ ರಂಗನಾಥನ್ನರು ಹೇಳಿದ ಮಾತಿನಲ್ಲಿ ಸತ್ಯಾಂಶವಿಲ್ಲದಿಲ್ಲ.

## ೨. ಮೋಕ್ಷಗುಂಡಂ

ವಿಶ್ವೇಶ್ವರಯ್ಯನವರು 'ಮೋಕ್ಷಗುಂಡಂ' ವಂಶಕ್ಕೆ ಸೇರಿದವರು. 'ಮೋಕ್ಷಗುಂಡಂ' ಎಂಬುದು ಆಂಧ್ರಪ್ರದೇಶದಲ್ಲಿರುವ ಒಂದು ಅಗ್ರಹಾರ. ಅದು ಕರ್ನೂಲು ಜಿಲ್ಲೆಯ ಗಿದ್ದಲೂರು ತಾಲೂಕಿನಲ್ಲಿ ಎರಡು ಬೆಟ್ಟಗಳ ಮಧ್ಯದಲ್ಲಿದೆ: ಗಿದ್ದಲೂರು ಸ್ಟೇಶನ್ನಿನಿಂದ ಹನ್ನೆರಡು ಮೈಲುಗಳ ಅಂತರದಲ್ಲಿದೆ. ಅಲ್ಲಿ ಐದು ಕೋನೇರು (ಗುಂಡ)ಗಳಿವೆ. ಆ ಗುಂಡಗಳ ಎದುರುಗಡೆ ಮುಕ್ತೇಶ್ವರವೆಂಬ ಒಂದು ದೇವಾಲಯವಿದೆ. ಅಲ್ಲಿಯ ಗುಂಡಗಳಲ್ಲಿ ಮಿಂದವರಿಗೆ ಮೋಕ್ಷ ಲಭಿಸುವದೆಂಬುದು ನಂಬಿಕೆ. ಆದ್ದರಿಂದಲೇ ಹತ್ತಿರದ ಗ್ರಾಮಕ್ಕೆ 'ಮೋಕ್ಷಗುಂಡಂ' ಎಂಬ ಅಭಿದಾನ ಪ್ರಾಪ್ತವಾಯಿತು. ಮೋಕ್ಷಗುಂಡಂ ವಂಶಜರು ಹದಿನೆಂಟನೆಯ ಶತಮಾನದ ಸುಮಾರಿನಲ್ಲಿ ಮೋಕ್ಷಗುಂಡಂ ಗ್ರಾಮವನ್ನು ಬಿಟ್ಟು ಬಂದು ಕೋಲಾರ ಜಿಲ್ಲೆಯಲ್ಲಿ ನೆಲಸಿರಬೇಕು.

## ೩. ಜನನ

ವಿಶ್ವೇಶ್ವರಯ್ಯನವರ ತಂದೆ ಶ್ರೀನಿವಾಸ ಶಾಸ್ತ್ರಿಗಳು ಮೋಕ್ಷಗುಂಡಂ ವಂಶದಲ್ಲಿ ಜನಿಸಿದವರು. ಇವರು ತರ್ಕ ಮೀಮಾಂಸೆ ಶಾಸ್ತ್ರಗಳಲ್ಲಿ ನಿಪುಣರೂ, ಯೋಗಾಭ್ಯಾಸ ಮಾಡಿದವರೂ, ಅನುಭವಿಕ ವೈದ್ಯರೂ ಆಗಿದ್ದರು. ಇವರಿಗೆ ಇಬ್ಬರು ಹೆಂಡಂದಿರು.

ಮೊದಲಿನ ಹೆಂಡತಿಯಲ್ಲಿ ತಿಮ್ಮಪ್ಪಶಾಸ್ತ್ರಿ ಎಂಬ ಮಗುವನ್ನು ಪಡೆದರು. ಪ್ರಥಮ ಪತ್ನಿ ಅಸುನೀಗಿದ ನಂತರ ವೆಂಕಾಚಮ್ಮ (ವೆಂಕಟಲಕ್ಷ್ಮಮ್ಮ) ಶ್ರೀನಿವಾಸಶಾಸ್ತ್ರಿಗಳ ಧರ್ಮಪತ್ನಿಯಾದರು. ಇವರಿಗೆ ಒಟ್ಟು ಆರು ಜನ ಮಕ್ಕಳು. ಇವರ ಎರಡನೆಯ ಮಗುವೇ ಕಾಶಿ ವಿಶ್ವನಾಥನ ನಾಮಾಂಕಿತವನ್ನು ಹೊತ್ತ ವಿಶ್ವೇಶ್ವರಯ್ಯನವರು.

ವಿಶ್ವೇಶ್ವರಯ್ಯನವರು ೧೫–೯–೧೮೬೧ ರಂದು ಜನಿಸಿದರೆಂದು ಅನೇಕ ಜನರು ನಂಬಿದ್ದಾರೆ. ಅದಕ್ಕೆ ಆಧಾರಗಳಿಲ್ಲದಿಲ್ಲ. 'ಜ್ಞಾನಗಂಗೋತ್ರಿ' ಸಂಪುಟ–೧ರಲ್ಲಿ ಅವರ ಜನ್ಮ ದಿನವನ್ನು ೧೮೬೧ ಸೆಪ್ಟೆಂಬರ್ ೧೬ ಎಂದೂ, ಸಂಪುಟ–೪ರಲ್ಲಿ ೧೮೬೧ ಸೆಪ್ಟೆಂಬರ್ ೧೫ ಎಂದೂ ಹೇಳಲಾಗಿದೆ. 'ಭಾಗ್ಯಶಿಲ್ಪಿ' ಎಂಬ ಪುಸ್ತಕದಲ್ಲಿಯೂ ಅವರ ಜನ್ಮ ದಿನಾಂಕವನ್ನು ೧೫–೯–೧೮೬೧ ಎಂದೇ ಬರೆಯಲಾಗಿದೆ. 'ಎಂ. ವಿಶ್ವೇಶ್ವರಯ್ಯ' ಎಂಬ ಪುಸ್ತಕದಲ್ಲಿ ಶ್ರೀಮಾನ್ ಎಲ್. ಎಸ್. ಶೇಷಗಿರಿರಾವ್ ಅವರೂ ವಿಶ್ವೇಶ್ವರಯ್ಯನವರು ೧೮೬೧ರ ಸೆಪ್ಟೆಂಬರ್ ೧೫ ರಂದು ಹುಟ್ಟಿದರು ಎಂದು ತಿಳಿಸಿದ್ದಾರೆ. ಇನ್ನೂ ಅನೇಕ ಪುಸ್ತಕಗಳಲ್ಲಿ ಇದೇ ರೀತಿ ಹೇಳಲಾಗಿದೆ.

ಆದರೆ ಶ್ರೀಮಾನ್ ತಿ. ತಾ. ಶರ್ಮ ಅವರು ತಮ್ಮ 'ಮೋಕ್ಷಗುಂಡಂ' ಎಂಬ ಪುಸ್ತಕದಲ್ಲಿ ವಿಶ್ವೇಶ್ವರಯ್ಯನವರ ಜಾತಕವನ್ನು ಕೊಟ್ಟು ಈ ರೀತಿ ಹೇಳಿದ್ದಾರೆ:

**ಜಾತಕ :** "ಸ್ವಸ್ತಿಶ್ರೀ ಶಾಲಿವಾಹನ ಶಕ ೧೭೮೨. ಕಲಿ ೪೯೬೧, ರೌದ್ರಿನಾಮ ಸಂವತ್ಸರ ಭಾದ್ರಪದ ಶುದ್ಧ ಏಕಾದಶಿ. ಸೋಮವಾರ ೬-೨೭. ಪೂರ್ವಾಷಾಢಾ ೧೯-೨೫, ಆಯು ೨೪-೪೯. ಭವ ೬-೨೭ ಸಿಂಹ ಸಂಕ್ರಮಣ ತೇದಿ ೧೩. ತಾ॥ ೨೭-೮-೧೮೬೦. ಈ ಶುಭದಿನ ಉದಯಾದಿ ೩೨-೦ ಘಳಿಗೆ. ಕುಂಭ ಲಗ್ನ, ಏಕಾಂಶದಲ್ಲಿ ಜನನ".

"It was in February 1884, in my twentythird year, that I received an appointment as Assistant Engineer in the Public Works Department of the Govt. of Bombay"[೧] ಎಂಬುದಾಗಿ ತಮ್ಮ ಪುಸ್ತಕದಲ್ಲಿ ಶ್ರೀ ವಿಶ್ವೇಶ್ವರಯ್ಯನವರೇ ಬರೆದಿದ್ದಾರೆ. ಇದರಿಂದ ಜನ್ಮದಿನ ಗೊತ್ತಾಗುವದಿಲ್ಲ. ೧೮೮೪ರಲ್ಲಿ ೨೩ನ್ನು ಕಳೆದು. ಅವರು ಹುಟ್ಟಿದ್ದು ೧೮೬೧ರಲ್ಲೆಂದು ಯಾರೋ ಭಾವಿಸಿ ಆರಂಭಿಸಿರಬೇಕು. ಆದರೆ 'ಸೆಪ್ಟೆಂಬರ್ ೧೫ನೇ ತಾರೀಖು' ಎಂಬುದಾಗಿ ಸಿದ್ಧಾಂತ ಯಾರು ಮಾಡಿದರೋ. ಹೇಗೆ ಮಾಡಿದರೋ ಗೊತ್ತಿಲ್ಲ. ರೌದ್ರಿ, ಭಾದ್ರಪದ ಶುದ್ಧ ಏಕಾದಶಿ, ಸೋಮವಾರಕ್ಕೆ ೨೭-೮-೧೮೬೦ ಸರಿಹೋಗುತ್ತದಲ್ಲದೆ, ೧೫-೯-೧೮೬೧ಕ್ಕೆ ಹೊಂದುವದಿಲ್ಲ".[೨]

೧೫-೯-೧೯೬೦ ರಂದು ಅವರ ಶತಮಾನೋತ್ಸವವನ್ನು ಆಚರಿಸಲಾಯಿತು. ಅಂದು ಅವರಿಗೆ ನೂರು ವರ್ಷ ತುಂಬಿತು.

---

೧. Memoirs of My Working Life.
೨. ತಿ. ತಾ. ಶರ್ಮ (ಮೋಕ್ಷಗುಂಡಂ. ಪು-೨೫)

೧೫-೯-೧೮೬೧ ಅವರ ಜನ್ಮದಿನವಾದರೆ ೧೫-೯-೧೯೬೧ಕ್ಕೆ ನೂರು ವರ್ಷಗಳಾಗುವದಿಲ್ಲ; ಒಂದು ವರ್ಷ ಕಡಿಮೆಯಾಗುತ್ತದೆ. ಆದ್ದರಿಂದ ವಿಶ್ವೇಶ್ವರಯ್ಯನವರು ಹುಟ್ಟಿದ್ದು ೧೮೬೦ರಲ್ಲೇ ಎಂದು ಹೇಳಬಹುದು.

ವಿಶ್ವೇಶ್ವರಯ್ಯನವರು ತಮ್ಮ ಜನ್ಮದಿನ, ಹುಟ್ಟಿದ ಊರು, ಮಾತಾ-ಪಿತೃಗಳ ಬಗ್ಗೆ ಯಾವ ಪುಸ್ತಕದಲ್ಲಿಯೂ ಬರೆದಿಟ್ಟಿಲ್ಲ. ಆದ್ದರಿಂದಲೇ ಇಂಥ ಎಷ್ಟೋ ಭಿನ್ನಾಭಿಪ್ರಾಯಗಳಿಗೆ ಎಡೆಯುಂಟು. ಆದರೆ ಅವರನ್ನು ತೀರ ಹತ್ತಿರದಿಂದ ಕಂಡು ಅವರ ಬಗ್ಗೆ ಆಳವಾಗಿ ಅಭ್ಯಾಸಮಾಡಿದ ಶ್ರೀಮಾನ್ ತಿ. ತಾ. ಶರ್ಮ ಅವರ ಅಭಿಪ್ರಾಯವೇ ಸರಿಯೆಂದು ತೋರುತ್ತದೆ.

ಅವರ ಜನ್ಮದಿನ ಯಾವುದಾದರೂ ಇರಲಿ. ಇಂದು ನಮಗೆ ಇದು ಮುಖ್ಯವಲ್ಲ, ಅವರ ಕಾರ್ಯ ಸಾಧನೆಗಳನ್ನು ಪರಿಚಯಮಾಡಿಕೊಳ್ಳಬೇಕಾಗಿದೆ.

## ೨. ವಿದ್ಯಾರ್ಥಿ ಜೀವನ

ವಿಶ್ವೇಶ್ವರಯ್ಯನವರು ತಮ್ಮ ಐದು ವರ್ಷಗಳ ಬಾಲ್ಯ ಜೀವನವನ್ನು ಮುದ್ದೇನಹಳ್ಳಿಯಲ್ಲಿ ಕಳೆದರು. ಶ್ರೀನಿವಾಸ ಶಾಸ್ತ್ರಿಗಳು ಒಮ್ಮೆ ಊರಿನಲ್ಲಿಲ್ಲದಾಗ ಮನೆಯಲ್ಲಿ ಒಂದು ಚಿಕ್ಕ ಕಳವಾದುದರಿಂದ ಅವರು ಹೆದರಿ ಮುದ್ದೇನಹಳ್ಳಿಯನ್ನು ಬಿಟ್ಟು ಚಿಕ್ಕಬಳ್ಳಾಪುರಕ್ಕೆ ಬಂದರು.

ಆದರ್ಶ ಗುರುಗಳ ಸಾನ್ನಿಧ್ಯದಲ್ಲಿ ವಿಶ್ವೇಶ್ವರಯ್ಯನವರ ಪ್ರಾಥಮಿಕ ವಿದ್ಯಾಭ್ಯಾಸವು ಚಿಕ್ಕಬಳ್ಳಾಪುರದಲ್ಲಿ ಪ್ರಾರಂಭ ವಾಯಿತು. ಶ್ರೀ ಕೃಷ್ಣಗಿರಿಯ ರಾಘವೇಂದ್ರರಾಯರು, ಬಿ. ವೆಂಕಟಪತಯ್ಯಂಗಾರರು ಹಾಗೂ ನಾಥಮುನಿ ನಾಯಿಡುರವರು ಇವರ ಅಚ್ಚುಮೆಚ್ಚಿನ ಅಧ್ಯಾಪಕರಾಗಿದ್ದರು. ಅವರನ್ನು ವಿಶ್ವೇಶ್ವರಯ್ಯನವರು ಪೂಜ್ಯಭಾವನೆಯಿಂದ ಕಾಣುತ್ತಿದ್ದರು.

ಇವರ ವಿದ್ಯಾಸಕ್ತಿಯನ್ನು ಕಂಡು ಸೋದರ ಮಾವಂದಿ ರಾದ ಎಚ್. ರಾಮಯ್ಯನವರು ಇವರನ್ನು ಬೆಂಗಳೂರಿಗೆ ಕರೆ ದೊಯ್ದು ವೆಸ್ಲಿಯನ್ ಮಿಷನ್ ಮಾಧ್ಯಮಿಕ ಶಾಲೆಗೆ ಸೇರಿಸಿ ದರು. ಅನಂತರ ಸೆಂಟ್ರಲ್ ಕಾಲೇಜಿನಲ್ಲಿ ಓದಲುಪಕ್ರಮಿಸಿದರು. ಅಲ್ಲಿ ಇವರಿಗೆ ವಿದ್ಯಾರ್ಥಿವೇತನ ದೊರೆಯುತ್ತಿದ್ದರೂ ಖರ್ಚಿಗೆ ಹಣ ಸಾಲದೇ ಹೋಗುತ್ತಿತ್ತು. ಆದ್ದರಿಂದ ವಿಶ್ವೇಶ್ವರಯ್ಯ ನವರು ಮಕ್ಕಳಿಗೆ ಪಾಠ ಹೇಳಿಕೊಡಲು ತೊಡಗಿದರು.

ಸೆಂಟ್ರಲ್ ಕಾಲೇಜಿನ ಪ್ರಿನ್ಸಿಪಾಲರಾದ ಚಾರ್ಲ್ಸ್ ವಾಟರ್ಸ ರವರು ಇವರ ಗುಣ–ಸ್ವಭಾವಗಳನ್ನು ಮೆಚ್ಚಿಕೊಂಡು ತಮ್ಮಲ್ಲಿದ್ದ ಒಂದು ನಿಘಂಟುವನ್ನು ಬಹುಮಾನವಾಗಿ ಕೊಟ್ಟಿದ್ದರು. ಎಂತಹ ಗುರು–ಶಿಷ್ಯ ಬಾಂಧವ್ಯ !

೧೮೮೧ ರಲ್ಲಿ ವಿಶ್ವೇಶ್ವರಯ್ಯನವರು ಅತ್ಯುತ್ತಮ ಶ್ರೇಣಿ ಯಲ್ಲಿ ಬಿ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ, ದಿವಾನ್ ರಂಗಾ ಚಾರ್ಲು ಮತ್ತು ಚಾರ್ಲ್ಸ್ ವಾಟರ್ಸರವರ ಆಶೀರ್ವಾದಗಳನ್ನು ಹೊತ್ತು ಪುಣೆಯ ಸೈನ್ಸ್ ಕಾಲೇಜನ್ನು ಸೇರಿ, ಮೂರು ವರ್ಷ

ಗಳಲ್ಲಿ ಮುಗಿಸಬೇಕಾಗಿದ್ದ ವ್ಯಾಸಂಗವನ್ನು ಎರಡೂವರೆ ವರ್ಷ ಗಳಲ್ಲಿಯೇ ಮುಕ್ತಾಯಗೊಳಿಸಿ, ೧೮೮೩ರಲ್ಲಿ ಎಲ್.ಸಿ.ಇ. ಮತ್ತು ಎಫ್.ಸಿ.ಇ.(ಎಂಜನಿಯರಿಂಗ್) ಪರೀಕ್ಷೆಗಳಲ್ಲಿ ಮೊದಲನೆಯವ ರಾಗಿ ತೇರ್ಗಡೆ ಹೊಂದಿ 'ಜೇಮ್ಸ್ ಬರ್ಕ್ಲೆ' ಬಹುಮಾನವನ್ನು ದೊರಕಿಸಿದರು.

## ೫. ಸಾಂಸಾರಿಕ ಜೀವನ

ರಾಮಚಂದ್ರಶಾಸ್ತ್ರಿ ಎಂಬುವರು ವಿಶ್ವೇಶ್ವರಯ್ಯನವರ ವಿದ್ಯಾಬುದ್ಧಿಯನ್ನೂ, ಗುಣಶೀಲಗಳನ್ನೂ ಮೆಚ್ಚಿ ತಮ್ಮ ಪುತ್ರಿ ಸಾವಿತ್ರಮ್ಮನನ್ನು ಕೊಟ್ಟು ಲಗ್ನಮಾಡಿದರು. ೧೮೮೪ರಲ್ಲಿ ವಿಶ್ವೇಶ್ವರಯ್ಯನವರು ಪುಣೆಯಲ್ಲಿ ತಮ್ಮ ಸಾಂಸಾರಿಕ ಜೀವನ ವನ್ನು ಪ್ರಾರಂಭಿಸಿದರು. ಸದ್ಗುಣಶಾಲಿನಿಯಾದ ಸಾವಿತ್ರಮ್ಮ ನವರು ಪತಿಯ ಇಂಗಿತವನ್ನರಿತು ನಡೆಯುವ ಸತಿಯಾಗಿದ್ದರು. ಆದರೆ ವಿಧಿಯು ಕೆಲವೇ ದಿನಗಳಲ್ಲಿ ಅವರಿಬ್ಬರನ್ನು ಬೇರ್ಪಡಿಸಿತು. ಪತಿಚಿತ್ತಾನುವರ್ತಿಯಾಗಿದ್ದ ಸಾವಿತ್ರಮ್ಮನವರ ಸಾವಿನಿಂದ ವಿಶ್ವೇಶ್ವರಯ್ಯನವರಿಗೆ ಅಪಾರ ದುಃಖವಾಯಿತು.

ತಾಯಿ ವೆಂಕಾಚಮ್ಮ ಮತ್ತು ಇವರ ಸೋದರ ಮಾವಂದಿ ರಾದ ರಾಮಯ್ಯನವರೂ ಸೇರಿ ಸುಂದರಿಯೂ ವಿದ್ಯಾವತಿಯೂ, ಗುಣದಲ್ಲಿ ಮೊದಲನೆಯವಳನ್ನು ಮೀರಿಸುವಂಥವಳೂ ಆದ ಕನ್ಯೆಯೊಬ್ಬಳನ್ನು ತಂದು ವಿಶ್ವೇಶ್ವರಯ್ಯನವರಿಗೆ ಮರುಮದುವೆ

ಯನ್ನು ಮಾಡಿದರು. ಸತಿ–ಪತಿಗಳಿಬ್ಬರೂ ಆತ್ಮಾನಂದದಿಂದ ಸಂಸಾರ ಸಾಗರದಲ್ಲಿ ಬಾಳನೌಕೆಯನ್ನು ಸಾಗಿಸಿಕೊಂಡು ಹೊರಟಾಗ ವಿಧಿಯು ಅಡ್ಡಬಂದಿತು. ಸತಿಗೆ ಹೆರಿಗೆಯ ಸಮಯದಲ್ಲಿ ತುಂಬಾ ಕಷ್ಟವಾಗಿ ಅಸುನೀಗಿದರು. ವಿಶ್ವೇಶ್ವರಯ್ಯನವರಿಗೆ ಗಾಯದ ಮೇಲೆ ಕಾಯ್ದ ಕಬ್ಬಿಣದ ಸಲಾಕೆಯನ್ನಿಟ್ಟಂತಾಯಿತು.

ಕೆಲವು ದಿವಸಗಳುರುಳಿದ ನಂತರ ತಾಯಿ ವೆಂಕಾಚಮ್ಮನವರು ಮಗನಿಗೆ ಮತ್ತೊಂದು ಮದುವೆಯಾಗೆಂದು ಒತ್ತಾಯ ಮಾಡಲು ಪ್ರಾರಂಭಿಸಿದರು. ಆದರೆ ವಿಶೇಶ್ವರಯ್ಯನವರು ಅದಕ್ಕೊಪ್ಪಲಿಲ್ಲ. ತಾಯಿ ಹಟಹಿಡಿದು ಕುಳಿತರು. ಅನಿವಾರ್ಯವಾಗಿ ಮೂರನೆಯ ಮದುವೆಗೆ ಒಪ್ಪಿಕೊಂಡು ವಿಶ್ವೇಶ್ವರಯ್ಯನವರು ಲಗ್ನವಾಗಬೇಕಾಯಿತು. ಈ ಮೂರನೆಯ ಹೆಂಡತಿಯಿಂದ ಅವರಿಗೆ ಸಂಸಾರದಲ್ಲಿ ಯಾವ ಸುಖ–ಸಮಾಧಾನಗಳೂ ಲಭಿಸಲಿಲ್ಲವೆಂದು ಕಂಡು ಬರುತ್ತದೆ. ಈ ವಿವಾಹವು ದುರಂತವಾಗಿ ಪರಿಣಮಿಸಿದುದರಿಂದ ವಿಶ್ವೇಶ್ವರಯ್ಯನವರು ಜಿತೇಂದ್ರಿಯರಾಗಿಯೇ ಉಳಿದರಂತೆ!

# ೬. ವೃತ್ತಿ ಜೀವನದಲ್ಲಿ ಪದಾರ್ಪಣ

ನೂರಾರು ವರುಷಗಳವರೆಗೆ ಕನಸಾಗಿ ಉಳಿದಿದ್ದ ಎಷ್ಟೋ ಯೋಜನೆಗಳನ್ನು ನನಸಾಗಿ ಮಾಡಿದ ವಿಶ್ವೇಶ್ವರಯ್ಯನವರನ್ನು "ಶತಾಯುಷಿ ವಿಶ್ವೇಶ್ವರಯ್ಯನವರು" ಎಂಬ ಕವನದಲ್ಲಿ ಖ್ಯಾತ ಕವಿಗಳಾದ ಶ್ರೀಮಾನ್ ಚೆನ್ನವೀರ ಕಣವಿಯವರು,

"ಸಂಕಲ್ಪಮಾತ್ರದಲಿ ಶತಮಾನಗಳ ಕನಸ
ಕಡೆದು ನಿಲಿಸುವ ಶಿಲ್ಪಿ; ಯಂತ್ರ–ಗಡ ಗಡ–ಗಾಲಿ
ಉಕ್ಕು–ಕಬ್ಬಿಣ–ಸೊಕ್ಕು, ವಿದ್ಯುಚ್ಛಕ್ತಿ ವೈಲಿ !"[೧]

ಎಂದು ಹೊಗಳಿ ಹಾಡಿದ್ದಾರೆ.

ವಿದ್ಯಾರ್ಥಿ ಜೀವನ ಮುಗಿದ ತಕ್ಷಣ ಉದ್ಯೋಗವೇ ಅವರನ್ನು ಅರಸಿ ಬಂದಿತು. ಅವರು ವೃತ್ತಿಜೀವನಕ್ಕಿಳಿದಾಗ ಅವರಿಗೆ ಕೇವಲ ಇಪ್ಪತ್ತುಮೂರು ವರ್ಷ ವಯಸ್ಸು. ಭಾರತೀಯರನ್ನು ದಾಸ್ಯ–ದಾರಿದ್ರ್ಯ, ಅಜ್ಞಾನ–ಆಲಸ್ಯಗಳ ಬಂಧನದಿಂದ ಬಿಡಿಸಿ, ಅವರು ಕರ್ತವ್ಯನಿರತರಾಗುವಂತೆ ಮಾಡುವುದೇ ವಿಶ್ವೇಶ್ವರಯ್ಯನವರ ಮಹೋದ್ದೇಶವಾಗಿತ್ತು. ಮೊಟ್ಟಮೊದಲು ಮುಂಬಯಿ ಪ್ರಾಂತಕ್ಕೆ ಸೇರಿದ ನಾಸಿಕ ಜಿಲ್ಲೆಯಲ್ಲಿ ಅವರು ಲೋಕೋಪಯೋಗಿ ಇಲಾಖೆಯ ಸಹಾಯಕ ಎಂಜಿನಿಯರಾಗಿ ಕೆಲಸಕ್ಕೆ ಸೇರಿಕೊಂಡರು.

---

೧. ಚಿರಂತನ ದಾಹ. ಪ. ೧೧೦

## ೭. ಸೈಫನ್

ಕೆಲಸಕ್ಕೆ ಸೇರಿಕೊಂಡ ಪ್ರಾರಂಭದಲ್ಲಿಯೇ ಒಂದು ಹೊಣೆಗಾರಿಕೆಯ ಕೆಲಸ ಇವರ ಪಾಲಿಗೆ ಬಂತು. ಅದು ಪಂಜ್ರ ನದಿಯಿಂದ ದತಾರಿ (ದತಾರ್ತಿ) ಎಂಬ ಹಳ್ಳಿಯ ಹೊಲಗಳಿಗೆ ವಕ್ರ ಕೊಳವೆಗಳ ಮೂಲಕ ನೀರನ್ನು ಪೂರೈಸುವದಾಗಿತ್ತು.

ಮಳೆಗಾಲ ಪ್ರಾರಂಭವಾಗುವದಕ್ಕಿಂತ ಮುಂಚೆಯೇ ವಿಶ್ವೇಶ್ವರಯ್ಯನವರು ಆ ಕೆಲಸವನ್ನು ಕೈಗೆತ್ತಿಕೊಂಡರು. ಅಲ್ಲಿ ಕೊಳವೆಗಳನ್ನಿಡಲು ಸುರಂಗ ಮಾರ್ಗವನ್ನು ಕೊರೆಯುವಷ್ಟೊತ್ತಿಗೆ ಮಳೆಗಾಲ ಪ್ರಾರಂಭವಾಗಿ, ಅಲ್ಲಿ ನೀರು ಮತ್ತು ಮಳಲು ಬಂದು ತುಂಬಲು ಶುರುವಾಯಿತು. ಅದನ್ನು ತೆಗೆಯಿಸದೆ ಕೆಲಸವನ್ನು ಮುಂದುವರಿಸಲು ಸಾಧ್ಯವಿರಲಿಲ್ಲ, ಕಾರಣ ಅವರು ಕೆಲಸವನ್ನು ಸ್ವಲ್ಪ ದಿವಸಗಳವರೆಗೆ ನಿಲ್ಲಿಸಲು ಅನುಮತಿಯನ್ನು ಕೋರಿ ಮೇಲಧಿಕಾರಿಗಳಿಗೆ ಪತ್ರ ಬರೆದು ಕೇಳಿದಾಗ ನಕಾರಾತ್ಮಕ ಉತ್ತರ ಬಂದಿತು. ಅದರಲ್ಲಿ ವಿಶ್ವೇಶ್ವರಯ್ಯನವರ ಅಜ್ಞಾಪಾಲನೆ, ಕರ್ತವ್ಯದಕ್ಷತೆಯ ಬಗ್ಗೆ ಆಕ್ಷೇಪಣೆ ಇತ್ತು. ಇದರಿಂದ ಅವರು ಎದೆಗುಂದದೆ ಅಲ್ಲಿದ್ದ ಜನರನ್ನು ಹುರಿದುಂಬಿಸಿ ಎರಡೇ ತಿಂಗಳುಗಳಲ್ಲಿ ಆ ಕೆಲಸವನ್ನು ಪೂರ್ತಿಮಾಡಿದರು. ನದಿಯ ಪಾತ್ರದಲ್ಲಿಟ್ಟಿದ್ದ ವಕ್ರ ಕೊಳವೆಗಳ ಮೂಲಕ ನದಿಯ ನೀರು ಕಾಲುವೆಗಳಿಗೆ ಸತತವಾಗಿ ಹರಿಯುವಂತೆ ಮಾಡಿದುದನ್ನು ಕಂಡು ಮೇಲಧಿಕಾರಿಗಳು ವಿಶ್ವೇಶ್ವರಯ್ಯನವರ ಧೈರ್ಯ, ಸ್ಥೈರ್ಯ ಮತ್ತು ಕಾರ್ಯೋತ್ಸಾಹಗಳನ್ನು ಶ್ಲಾಘಿಸಿದರು.

## ೮. ಸಕ್ಕರಕ್ಕೆ ಸಿಂಧೂ ನದಿಯ ನೀರು

ಸಿಂಧ ಪ್ರಾಂತಕ್ಕೆ ಸೇರಿದ ಸಕ್ಕರಕ್ಕೆ ಸಿಂಧೂ ನದಿಯಿಂದ ಕುಡಿಯುವ ನೀರನ್ನು ಪೂರೈಕೆ ಮಾಡಬೇಕಾಗಿದ್ದಿತು. ನದಿಯ ಕಲಕಾದ ನೀರನ್ನು ಸೋಸಿ, ಶುದ್ಧ ಮಾಡಿ ನಗರಕ್ಕೆ ನಿರ್ಮಲೋದಕವನ್ನು ಒದಗಿಸಬೇಕಾಗಿತ್ತು. ಆದರೆ ಸಕ್ಕರ ಪುರಸಭೆಗೆ ನೀರನ್ನು ಶುಚಿಗೊಳಿಸುವ ಶೋಧಕ ಯಂತ್ರಗಳನ್ನು ಕೊಳ್ಳುವ ಶಕ್ತಿ ಇದ್ದಿರಲಿಲ್ಲ. ವಿಶ್ವೇಶ್ವರಯ್ಯನವರು ತಮ್ಮದೇ ಆದ ಒಂದು ಯೋಜನೆಯನ್ನು ಸಿದ್ಧಗೊಳಿಸಿದರು. ನದಿಯ ತೀರದಲ್ಲಿ ಒಂದು ದೊಡ್ಡ ಬಾವಿಯನ್ನು ತೋಡಿಸಿ. ನದಿಯ ನೀರು ಕೆಳಭಾಗದಿಂದ ಉಸುಕಿನ ಮೂಲಕ ಸೋಸಿ ಬರುವಂತೆ ಮಾಡಿದರು. ಇದರಿಂದ ಫಿಲ್ಟರು ಕಟ್ಟುವ ಆವಶ್ಯಕತೆ ಇರಲಿಲ್ಲ. ೧೮೯೫ರ ಅಗಸ್ಟ ತಿಂಗಳಿನಲ್ಲಿ ಆ ಯೋಜನೆ ಕಡಿಮೆ ವೆಚ್ಚದಲ್ಲಿ ಪೂರ್ತಿಗೊಂಡಿತು. ಆಂಗ್ಲ ಅಧಿಕಾರಿಗಳೂ, ಸಕ್ಕರಿನ ಜನತೆಯೂ ವಿಶ್ವೇಶ್ವರಯ್ಯನವರ ಕರ್ತೃತ್ವ ಶಕ್ತಿಯನ್ನು ಮೆಚ್ಚಿ ಕೊಂಡಾಡಿದರು.

## .. ಸ್ವಯಂಚಾಲಕ ತೂಬಿನ ಬಾಗಿಲುಗಳು

ಪುಣೆ ನಗರಕ್ಕೆ ಮತ್ತು ನೆರೆಯ ದಂಡಿನ ಕ್ಷೇತ್ರಕ್ಕೆ ಕುಡಿ
ಯುವ ನೀರನ್ನು ಖಿಡಕವಾಸಲಾ ಸರೋವರದಿಂದ ಪೂರವಟಿ
ಮಾಡಲಾಗುತ್ತಿತ್ತು. ಆದರೆ ನಗರ ಬೆಳೆದಂತೆ ನೀರು ಸಾಕಷ್ಟು
.ಷ್ಟವಾಗದೆ ಹೋಗಬಹುದೆಂಬ ಶಂಕೆ ತಲೆದೋರಿತು. ಮಳೆ
.ಲದಲ್ಲಿ ಸರೋವರ ತುಂಬಿ, ಕಟ್ಟೆಯ ಮೇಲೆ ಏಳೆಂಟು ಅಡಿ
.ಷ್ಟು ನೀರು ವ್ಯರ್ಥವಾಗಿ ಹರಿದು ಹೋಗುತ್ತಿತ್ತು. ಆ
.ರನ್ನು ತಡೆದು ನಿಲ್ಲಿಸಿದರೆ ಸಾಕಷ್ಟು ನೀರು ಸಿಗಬಹು
.ದೂಹಿಸಿ, ಕಟ್ಟೆಯಲ್ಲಿ ತಮ್ಮಷ್ಟಕ್ಕೆ ತಾವೆ ಮುಚ್ಚಿ ತೆರೆಯುವ
.ಗಿಲುಗಳನ್ನು ಕೂಡ್ರಿಸಲು ನಿರ್ಧರಿಸಿದರು.

ಮುಂಬಯಿಯ ಒಂದು ಆಂಗ್ಲ ಕಾರ್ಖಾನೆಯಲ್ಲಿ ಆ
.ಗಿಲುಗಳನ್ನು ತಯಾರಿಸಿ, ೧೯೦೧ರಲ್ಲಿ ಖಿಡಕವಾಸಲಾ ಸರೋ
.ರದ ಕಟ್ಟೆಗೆ ಜೋಡಿಸಲಾಯಿತು. ಆ ಬಾಗಿಲುಗಳು
.ಡಿಯ ಮೇಲೆ ಹರಿದು ಹೋಗುತ್ತಿದ್ದ ಎಂಟು ಅಡಿಗಳ
.ತ್ತರದ ನೀರನ್ನು ತಡೆದು ನಿಲ್ಲಿಸುತ್ತವೆ. ಅದಕ್ಕೂ ಹೆಚ್ಚು
.ರು ಬಂದಾಗ ಬಾಗಿಲುಗಳು ತಾವಾಗಿಯೇ ತೆರೆದು ಹೆಚ್ಚಾದ
.ರು ಹರಿದು ಹೋಗಿ, ಮತ್ತೆ ನೀರಿನ ಮಟ್ಟ ಎಂಟು ಅಡಿಗಳಿಗೆ
.ರುತ್ತಲೆ ಮುಚ್ಚಿಕೊಳ್ಳುತ್ತವೆ !

ಇಂಥ ಬಾಗಿಲುಗಳನ್ನು ಗ್ವಾಲ್ಹೇರಿನ ಟಿಗ್ರಾ ಆಣೆಕಟ್ಟಿಗೂ,
.ರ್ನಾಟಕದಲ್ಲಿರುವ ಕೃಷ್ಣರಾಜಸಾಗರ ಆಣೆಕಟ್ಟಿಗೂ ಕೂಡ್ರಿಸ

ಲಾಗಿದೆ. ಅಷ್ಟೇ ಅಲ್ಲದೆ, ಅಮೇರಿಕಾ ಖಂಡದ 'ಪನಾಮಾ' ಕಾಲುವೆಯಲ್ಲಿಯೂ ವಿಶ್ವೇಶ್ವರಯ್ಯನವರು ಕಂಡು ಹಿಡಿದ ಪದ್ಧತಿಯ ಸ್ವಯಂಚಾಲಕ ತೂಬಿನ ಬಾಗಿಲುಗಳನ್ನು ಜೋಡಿಸಿದ್ದಾರೆ. ಇಂದಿಗೂ ಈ ಬಾಗಿಲುಗಳು ಅತ್ಯಂತ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿರುವದು ಅವರ ವಿಚಕ್ಷಣತೆಗೆ ಸಾಕ್ಷಿಯಾಗಿದೆ; ಅವರ ಕೀರ್ತಿ ಶಿಖರಕ್ಕೆ ಅವು ಕಳಸವನ್ನಿಡುವಂಥದ್ದಾಗಿವೆ.

## ೧೦. ಕೈಸರ್-ಈ-ಹಿಂದ್ ಪ್ರಶಸ್ತಿ

ವಿಶ್ವೇಶ್ವರಯ್ಯನವರ ಸೇವೆ ಭಾರತಮಾತೆಗಷ್ಟೇ ಮೀಸಲಾಗಿರಲಿಲ್ಲ, ಹೊರನಾಡಿಗೂ ಬೇಕಾಗಿತ್ತು. ಈಗಾಗಲೇ ಅವರ ನೇತೃತ್ವದಲ್ಲಿ ಕರಾಚಿ, ಅಹಮದಾಬಾದ, ಬೆಳಗಾಂವಿ, ವಿಜಾಪುರ, ಧಾರವಾಡ ಮುಂತಾದ ಊರುಗಳಿಗೆ ಕುಡಿಯುವ ನೀರಿನ ಯೋಜನೆಗಳು ಕೊನೆಗೊಂಡಿದ್ದವು. ವಿಶ್ವೇಶ್ವರಯ್ಯನವರ ಕರ್ತವ್ಯದಕ್ಷತೆಗೆ ಮಾರುಹೋದ ಆಂಗ್ಲ ಅಧಿಕಾರಿಗಳು ಅವರನ್ನು ಏಡನ್ ನಗರಕ್ಕೆ ಕುಡಿಯುವ ನೀರಿನ ಪೂರೈಕೆಯ ವ್ಯವಸ್ಥೆಗೆ ಕಳುಹಿಸಿದರು.

ಮರಳುಗಾಡಿನಿಂದ ಸುತ್ತುವರಿದ ಏಡನ್ ನಗರದ ಜನತೆ ಸಮುದ್ರದ ನೀರನ್ನು ಭಟ್ಟಿಯಿಳಿಸಿ ಬಳಸುತ್ತಿದ್ದರು. ಇದಕ್ಕಾಗಿ ಅವರು ಒಂದು ವರ್ಷಕ್ಕೆ ಸುಮಾರು ಏಳು ಲಕ್ಷ ರೂಪಾಯಿಗಳಷ್ಟು ಹಣವನ್ನು ಖರ್ಚುಮಾಡುತ್ತಿದ್ದರು. ಅದ್ದರಿಂದ

ಶಾಶ್ವತವಾದ ಒಂದು ಯೋಜನೆಯನ್ನು ಸಿದ್ಧಗೊಳಿಸಿಕೊಡಲು ವಿಶ್ವೇಶ್ವರಯ್ಯನವರನ್ನು ಅಲ್ಲಿಗೆ ಕಳುಹಿಸಲಾಯಿತು. ಅವರು ಒಂದು ಮಾರ್ಗವನ್ನು ಕಂಡುಹಿಡಿದರು. ಏಡನ್ನಿನಿಂದ ಸುಮಾರು ಅರವತ್ತು ಮೈಲುಗಳ ದೂರದಲ್ಲಿ ಬೆಟ್ಟದ ಪ್ರದೇಶವಿದೆ. ಅಲ್ಲಿ ಬಿದ್ದ ಮಳೆಯ ನೀರು ಹಳ್ಳವಾಗಿ ಹರಿದು ಲಹೆಜ್ ಹತ್ತಿರ ಉಸುಕಿನಲ್ಲಿ ಕಣ್ಮರೆಯಾಗಿ ಬಿಡುತ್ತದೆ. ಅಲ್ಲಿಯೇ ಒಂದು ದೊಡ್ಡ ಬಾವಿಯನ್ನು ತೋಡಿಸಿ, ನೀರನ್ನು ಸಂಗ್ರಹಿಸಿ ಅಲ್ಲಿಂದ ನಳಗಳ ಮೂಲಕ ನೀರನ್ನು ಏಡನ್ನಿಗೆ ತರಬಹುದೆಂದು ವಿಶ್ವೇಶ್ವರಯ್ಯನವರು ಸೂಚಿಸಿದರು. ಅವರ ಈ ಯೋಜನೆಯನ್ನು ಇಂಗ್ಲ ಸರಕಾರ ಅಂಗೀಕರಿಸಿ ಅವರಿಗೆ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿ, 'ಕೈಸರ್-ಈ-ಹಿಂದ್' ಎಂಬ ಪ್ರಶಸ್ತಿಯನ್ನು ನೀಡಿತು.

## ೧೧. ಹೈದರಾಬಾದ ಸಂಸ್ಥಾನದಲ್ಲಿ ಸೇವೆ

ಮುಂಬಯಿ ಸರಕಾರದ ಸೇವೆಯಿಂದ ನಿವೃತ್ತಿಯನ್ನು ಹೊಂದಿದ ಮೇಲೆ ಜ್ಞಾನಾರ್ಜನೆಗಾಗಿ ಪ್ರಗತಿಪರವಾದ ದೇಶಗಳನ್ನು ಸಂದರ್ಶಿಸಬಯಸಿ, ವಿಶ್ವೇಶ್ವರಯ್ಯನವರು ಪ್ರವಾಸ ಕೈಕೊಂಡರು. ಅವರು ಪ್ರವಾಸದಲ್ಲಿದ್ದಾಗ ೧೯೦೮, ಅಕ್ಟೋಬರ್ ೨ನೇ ದಿನ ಹೈದರಾಬಾದಿನ ನಿಜಾಮ ಸರಕಾರದಿಂದ ವಿಶ್ವೇಶ್ವರಯ್ಯನವರಿಗೆ ಒಂದು ಕರೆಯೋಲೆ ಬಂದಿತು. ಆಗ ಅವರು ಇಟಲಿಯ ಮಿಲಾನ್ ನಗರದಲ್ಲಿದ್ದರು. ೨೮-೯-೧೯೦೮

ನೇಯ ದಿನ ಅತಿವೃಷ್ಟಿಯಿಂದಾಗಿ ಈಸಿ ನದಿಯ ೧೮೨ ಕೆರೆಗಳೂ, ಮೂಸಿ ನದಿಯ ೩೯ ಕೆರೆಗಳೂ ಒಡೆದು ಹೈದರಾಬಾದಿನ ನಡು ಮಧ್ಯದಲ್ಲಿ ಹರಿಯುತ್ತಿರುವ ಮೂಸಿ ನದಿಗೆ ಮಹಾಪೂರ ಬಂದು ಅಪಾರ ನಷ್ಟವಾಗಿತ್ತು. ಸಾವಿರಾರು ಜನರು ಮನೆ–ಮಠಗಳನ್ನು ಕಳೆದುಕೊಂಡು ನಿರ್ಗತಿಕರಾದರು; ದನ–ಕರುಗಳು ನೀರು ಪಾಲಾದವು. ಅಲ್ಲಿಯ ಜನರನ್ನು ಸಾವಿನ ದವಡೆಯಿಂದ ಪಾರು ಮಾಡಲು ವಿಶ್ವೇಶ್ವರಯ್ಯನವರಿಗೆ ಕರೆಯೋಲೆ ಕಳಿಸಲಾಗಿತ್ತು. ಅವರು ತಾವು ಅಮೇರಿಕೆಯ ಪ್ರವಾಸವನ್ನು ಮುಗಿಸಿಕೊಂಡು ಐದು ತಿಂಗಳ ತರುವಾಯ ಬರುವುದಾಗಿ ತಿಳಿಸಿದರು. ಪ್ರವಾಸ ಮುಗಿಸಿಕೊಂಡು ಮಾತೃಭೂಮಿಗೆ ಮರಳಿ ಬಂದು ೧೯೦೯ ಎಪ್ರಿಲ್‌ದಲ್ಲಿ ಹೈದರಾಬಾದಿನಲ್ಲಿ ವಿಶೇಷ ಎಂಜಿನಿಯರ್ ಹುದ್ದೆಯನ್ನು ವಹಿಸಿಕೊಂಡರು.

ಆ ನಗರದ ಸುರಕ್ಷಿತತೆಯ ಸಲುವಾಗಿ ಯೋಗ್ಯ ಎಂಜಿನಿಯರುಗಳ ಸಹಾಯದಿಂದ ಒಂದು ಯೋಜನೆಯನ್ನು ಸಿದ್ಧಪಡಿಸಿದರು. ನಗರದಿಂದ ಎಂಟೂವರೆ ಮೈಲುಗಳ ಮೇಲಕ್ಕೆ ಮೂಸಿ ನದಿಗೂ, ಆರೂವರೆ ಮೈಲುಗಳ ಮೇಲ್ಗಡೆ ಈಸಿ ನದಿಗೂ ಕಟ್ಟೆಗಳನ್ನು ಕಟ್ಟಿ, ನಗರದಲ್ಲಿ ಹರಿಯುವ ಮೂಸಿ ನದಿಯ ದಡಗಳನ್ನು ಎತ್ತರಿಸಿ ಭದ್ರಪಡಿಸಬೇಕೆಂಬುದೇ ಅವರ ಯೋಜನೆ. ಎತ್ತರವಾದ ದಡಗಳ ಮೇಲೆ ಸುಂದರವಾದ ಉಪವನಗಳನ್ನೂ, ವಿಹಾರ ಸ್ಥಳಗಳನ್ನೂ ನಿರ್ಮಿಸಬೇಕೆಂದು ಸೂಚಿಸಿದರು. ಆದರೆ ಈ ಯೋಜನೆಯನ್ನು ಕಾರ್ಯಗತಗೊಳಿಸಲು ಮೂರುವರೆ ವರ್ಷಗಳ ವಿಳಂಬವಾಗಿ, ೧೯೧೩ರ ಮಾರ್ಚ ತಿಂಗಳಲ್ಲಿ ಮೂಸಿ ಆಣೆಕಟ್ಟನ್ನು ಕಟ್ಟಲು ಪ್ರಾರಂಭಿಸಿದರು.

ನಗರ ಸೌಂದರ್ಯವನ್ನು ಕಾಪಾಡಲು ಒಳಚರಂಡಿ ಯೋಜನೆ. ಸಿಮೆಂಟ ಬೀದಿಗಳ ರಚನೆ. ವಿಶಾಲವಾದ ಕ್ರೀಡಾಂಗಣ ಗಳನ್ನು ನಿರ್ಮಿಸುವ ಯೋಜನೆಗಳನ್ನೂ ಸಿದ್ಧಗೊಳಿಸಿಕೊಟ್ಟರು. ಈ ಎಲ್ಲ ಕಾರ್ಯಗಳು ೧೯೩೦ರಲ್ಲಿ ಪೂರ್ತಿಗೊಂಡವು. ಇಂದು ಹೈದರಾಬಾದ ನಗರವು ಅತ್ಯಂತ ಪ್ರೇಕ್ಷಣೀಯ ಪಟ್ಟಣಗಳ ಲ್ಲೊಂದಾಗಿರುವದಕ್ಕೆ ವಿಶ್ವೇಶ್ವರಯ್ಯನವರೇ ಕಾರಣರೆಂದು ನಿಸ್ಸಂದೇಹವಾಗಿ ಹೇಳಬಹುದು.

## ೧೭. ಕನ್ನಂಬಾಡಿಯ ಆಣೆಕಟ್ಟಿನ ನೀರಾಕರದ ನಿರ್ಮಾಣ

ಪ್ರಧಾನ ಶಿರೋಮಣಿ ಟಿ. ಆನಂದರಾಯರು ದಿವಾನ ರಾದ ಮೇಲೆ ವಿಶ್ವೇಶ್ವರಯ್ಯನವರಿಗೊಂದು ಪತ್ರವನ್ನು ಬರೆದು ಮಹಾರಾಜರು ತಮ್ಮ ಸೇವೆಯನ್ನು ಮೈಸೂರಿಗೆ ವಿನಿಯೋಗಿಸಿ ಕೊಳ್ಳಲಪೇಕ್ಷಿಸಿದ್ದಾರೆಂದು ತಿಳಿಸಿ, ಕೂಡಲೆ ಮೈಸೂರಿನ ಮುಖ್ಯ ಎಂಜಿನಿಯರ ಹುದ್ದೆಯನ್ನು ಸ್ವೀಕರಿಸುವಂತ ಕೇಳಿಕೊಂಡರು. ಮೈಸೂರ ಸಂಸ್ಥಾನದ ಸೌಭಾಗ್ಯವಶದಿಂದ ವಿಶ್ವೇಶ್ವರಯ್ಯನವರು ೧೫-೧೧-೧೯೦೯ ರಂದು ಮುಖ್ಯ ಎಂಜಿನಿಯರ ಹುದ್ದೆಯನ್ನು ವಹಿಸಿಕೊಂಡರು.

ಎಂಜಿನಿಯರ ಹುದ್ದೆಯನ್ನು ವಹಿಸಿಕೊಂಡ ಮೇಲೆ ಮಾಡಿದ ಅತ್ಯಂತ ಮಹತ್ವದ ಕಾರ್ಯವೆಂದರೆ ಕೃಷ್ಣರಾಜ

ಸಾಗರದ ನಿರ್ಮಾಣ. ವ್ಯರ್ಥವಾಗಿ ಹರಿದು ಸಾಗರವನ್ನು ಸೇರುತ್ತಿದ್ದ ಕಾವೇರಿಯ ನೀರನ್ನು ಕನ್ನಂಬಾಡಿಯ ಹತ್ತಿರ ತಡೆದು ನಿಲ್ಲಿಸಿ, ಬೆಂಗಾಡಾಗಿದ್ದ ಮಂಡ್ಯ ಜಿಲ್ಲೆಯ ಭೂಮಿಗೆ ನೀರನ್ನೊದಗಿಸಿ ಅತ್ಯಂತ ಸಂಪದ್ಯುಕ್ತವಾದ ನಾಡನ್ನಾಗಿಸಿದ ಶ್ರೇಯಸ್ಸು ವಿಶ್ವೇಶ್ವರಯ್ಯನವರಿಗೆ ಸಲ್ಲುತ್ತದೆ.

ಕೃಷ್ಣರಾಜಸಾಗರ ಜಲಾಶಯದ ಉದ್ದ ಒಂದೂ ಕಾಲು ಮೈಲು. ತಳಪಾಯದಿಂದ ಎತ್ತರ ೧೪೦ ಅಡಿಗಳು. ಕಟ್ಟೆಯ ತಳದ ಅಗಲ ೧೧೧ ಅಡಿಗಳು. ಈಗ ನೀರಿನಲ್ಲಿ ಮುಳುಗಿದ ಕ್ಷೇತ್ರ ಸುಮಾರು ೧೮ ಸಾವಿರ ಎಕರೆ. ಆಗ ಸಿಮೆಂಟು ಸಿಗುತ್ತಿರಲಿಲ್ಲ. ಇಂಥ ಭವ್ಯವಾದ ಗೋಡೆಯನ್ನು ಕೇವಲ ಕಲ್ಲು ಮತ್ತು ಗಚ್ಚಿನಿಂದ (ಗಾರೆಯಿಂದ) ಕಟ್ಟಿದ್ದಾರೆಂದು ಕೇಳಿದರೆ ಪ್ರತಿಯೊಬ್ಬರಿಗೂ ಆಶ್ಚರ್ಯವಾಗದಿರದು.

ಜಲಾಶಯದ ನೀರನ್ನು ಹತೋಟಿಯಲ್ಲಿಡಲು ೧೭೧ ಬಾಗಿಲುಗಳನ್ನು ಕೂಡ್ರಿಸಿದ್ದಾರೆ. ಅವುಗಳಲ್ಲಿ ೪೮ ಸ್ವಯಂ ಚಾಲಕ ತೂಬಿನ ಬಾಗಿಲುಗಳಿವೆ. ನೀರಿನ ಮಟ್ಟ ನೂರಿಪ್ಪತ್ನಾಲ್ಕು ಅಡಿಗಳಿಗೆ ಹೆಚ್ಚಾದರೆ ಬಾಗಿಲುಗಳು ತಾವಾಗಿಯೆ ತೆರೆದು ಹೆಚ್ಚಾದ ನೀರು ಹರಿದು ಹೋಗಿ, ಮತ್ತೆ ಅವು ತಾವಾಗಿಯೇ ಮುಚ್ಚಿಕೊಳ್ಳುತ್ತವೆ.

ಈ ಜಲಾಶಯದ ಎಡಗಡೆಗೆ 'ವಿಶ್ವೇಶ್ವರಯ್ಯ ಕಾಲುವೆ' ಹರಿಯುತ್ತಿದೆ. ಹುಲಿಕೆರೆಯ ಹತ್ತಿರ ಒಂದೂವರೆ ಮೈಲುಗಳ

ವರೆಗೆ ಸುರಂಗ ಮಾರ್ಗದಲ್ಲಿ ಹರಿಯುವ ಈ ಕಾಲುವೆಯ ಒಟ್ಟು ಉದ್ದ ಅರವತ್ತು ಮೈಲುಗಳು. ಕನ್ನಂಬಾಡಿಯ ಕಟ್ಟೆ ಮತ್ತು ವಿಶ್ವೇಶ್ವರಯ್ಯ ಕಾಲುವೆಗಳಿಗಾಗಿ ವೆಚ್ಚವಾದ ಹಣ ಒಟ್ಟು ಹತ್ತೂವರೆ ಕೋಟಿ ರೂಪಾಯಿಗಳೆಂದು ತಿಳಿದು ಬರುತ್ತದೆ. ಈ ಜಲಾಶಯದ ನೀರಿನಿಂದ ಒಂದು ಲಕ್ಷ ಇಪ್ಪತ್ತು ಸಾವಿರ ಎಕರೆಗಳಲ್ಲಿ ಕಬ್ಬು, ಭತ್ತ ಮುಂತಾದ ಬೆಳೆಗಳನ್ನು ಬೆಳೆಯಲಾಗುತ್ತಿದೆ.

ವಿಶ್ವಪರ್ಯಟನ ಮಾಡಿ ಈಜಿಪ್ತ ದೇಶದ ಆಸ್ವಾನ್‌ದಂತಹ ಬೃಹದಾಕಾರದ ಆಣೆಕಟ್ಟುಗಳನ್ನು ಕಂಡು ಬಂದ ವಿಶ್ವೇಶ್ವರಯ್ಯನವರಿಗೆ ಕನ್ನಂಬಾಡಿ ಕಟ್ಟೆಯ ಯೋಜನೆಯನ್ನು ತಯಾರಿಸಲು ಬಹುಕಾಲ ಬೇಕಾಗಲಿಲ್ಲ. ಆಣೆಕಟ್ಟಿನ ಅಂದಾಜು ವೆಚ್ಚ ೨ ಕೋಟಿ ೫೩ ಲಕ್ಷ ರೂಪಾಯಿಗಳು. ಇಷ್ಟು ದೊಡ್ಡ ಪ್ರಮಾಣದ ಮೊತ್ತವನ್ನು ವೆಚ್ಚಮಾಡುವದೆಂದರೆ, ದಿವಾನ ಟಿ. ಆನಂದರಾಯರ ಹೊರತು, ಯಾರಿಗೂ ಧೈರ್ಯವಿರಲಿಲ್ಲ. ಮಹಾರಾಜರೂ ಈ ವಿಷಯದಲ್ಲಿ ಆಸಕ್ತಿಯನ್ನು ತೋರಲಿಲ್ಲ. ವಿಶ್ವೇಶ್ವರಯ್ಯನವರಿಗೆ ಉತ್ಸಾಹಭಂಗವಾಗಿ ಅವರು ರಜೆಯನ್ನು ಪಡೆದುಕೊಂಡು ಉತ್ತರ ದೇಶದ ಪ್ರವಾಸ ಕೈಕೊಂಡರು. ಮರಳಿ ಬಂದ ಮೇಲೆ ನಿರಾಶಾ ಮೋಡಗಳು ಮಾಯವಾಗಿರಬೇಕೆಂದು ಬಗೆದಿದ್ದರು. ಆದರೆ ಅವರ ಯೋಚನೆ ತಲೆಕೆಳಗಾಯಿತು. ರಾಜೀನಾಮೆಯನ್ನು ಕೊಡಬೇಕೆಂಬ ಯೋಚನೆಯೂ ಅವರ ಮನಸ್ಸಿನಲ್ಲಿ ಸುಳಿಯದಿರಲಿಲ್ಲ. ಎಲ್ಲ ಕೆಲಸಗಳನ್ನೂ ಅನಾಸಕ್ತಿಯಿಂದ, ಅರೆಮನಸ್ಸಿನಿಂದ ಮಾಡತೊಡಗಿದರು. ಇದು

ಮಹಾರಾಜರಿಗೆ ತಿಳಿದು, ಅವರ ಅನಾಸಕ್ತಿಗೆ ಕಾರಣವನ್ನು ಕಂಡುಕೊಂಡರು. ಮಹಾರಾಜರು ಅವರಿಗೆ "ಆತುರ ಪಡ ಬೇಡಿ, ತಮಗೇನು ಬೇಕೋ ಆ ಸೌಕರ್ಯಗಳನ್ನು ನಾವು ಒದಗಿಸಿ ಕೊಡುತ್ತೇವೆ" ಎಂದು ಆಶ್ವಾಸನೆಯನ್ನು ಕೊಟ್ಟರು.

'ವಿಘ್ನೇಶ್ವರನ ಲಗ್ನಕ್ಕೆ ಸಾವಿರ ವಿಘ್ನಗಳು' ಎಂಬಂತೆ ಕೃಷ್ಣರಾಜಸಾಗರದ ನಿರ್ಮಾಣಕ್ಕೆ ಮದರಾಸು ಸರಕಾರದವರು ಅಡ್ಡಿಯನ್ನುಂಟು ಮಾಡಿದರು. ಅವರು ಈ ಕಟ್ಟೆಯ ಕೆಳಗಡೆ ೬೦ ಮೈಲುಗಳ ಅಂತರದಲ್ಲಿ ಮೆಟ್ಟೂರಿನ ಬಳಿ ಒಂದು ನೀರಾ ಕರವನ್ನು (ಅಣೆಕಟ್ಟನ್ನು) ನಿರ್ಮಿಸಲು ನಿರ್ಧರಿಸಿದ್ದರು. ತಮ್ಮ ಜಲಾಶಯಕ್ಕೆ ಸಾಕಷ್ಟು ನೀರು ಬರದೆ ಹೋಗಬಹುದೆಂಬ ಶಂಕೆ ಅವರಲ್ಲಿ ಹುಟ್ಟಿ, ಜಗಳಕ್ಕೆ ಮೊದಲು ಮಾಡಿದ್ದರು. ಮೈಸೂರ ಸರಕಾರದವರು ನಿರುಪಾಯರಾಗಿ ಭಾರತ ಸರಕಾರದ ಅನುಮತಿ ಯನ್ನು ಕೋರಿದರು. ಅವರು ೮೦ ಅಡಿಗಳ ಎತ್ತರದ ಕಟ್ಟೆ ಯನ್ನು ಕಟ್ಟಲು ಅನುಮತಿಯನ್ನು ಕೊಟ್ಟರು. ಆದರೆ ವಿಶ್ವೇ ಶ್ವರಯ್ಯನವರು ಕಟ್ಟೆಯನ್ನು ಕಟ್ಟಲು ಪ್ರಾರಂಭಿಸಿದ್ದು ೧೩೦ ಅಡಿಗಳ ಎತ್ತರದ್ದು ! ಅವರು ಅಂಕಿ–ಅಂಶಗಳಿಂದ ಮೈಸೂರಿನ ನವರು ಉಪಯೋಗಿಸಬಹುದಾದ ನೀರೆಷ್ಟು, ಮತ್ತು ಮದರಾಸಿ ನವರು ವಿನಿಯೋಗಿಸಬಹುದಾದ ನೀರೆಷ್ಟೆಂಬುದನ್ನು ತೋರಿಸಿ ಕೊಟ್ಟು, ಮದರಾಸಿನವರಿಗೆ ಇದರಿಂದ ಏನೂ ತೊಂದರೆಯಿಲ್ಲ ವೆಂದು ತಿಳಿಸಿದರು. ಭಾರತ ಸರಕಾರವು ನಿಯಮಿಸಿದ ಪಂಚಾ ಯತಿಯು ೧೩೦ ಅಡಿಗಳಷ್ಟು ಎತ್ತರದ ಕಟ್ಟೆಗೆ ಅನುಮತಿ ಯನ್ನಿತ್ತಿತ್ತು. ಈ ಕಟ್ಟೆಯ ಕೆಲಸವು ೧೯೧೧ರಲ್ಲಿ ಪ್ರಾರಂಭ

ಾಗಿ ೧೯೩೧ರಲ್ಲಿ ಪೂರ್ಣವಾಯಿತು. ಪ್ರತಿನಿತ್ಯ ಹತ್ತು ಸಾವಿರ ಷ್ಟು ಜನರು ಇಪ್ಪತ್ತು ವರ್ಷಗಳವರೆಗೆ ಅವ್ಯಾಹತವಾಗಿ ಹಿಡಿದರಂತೆ !

ಆರ್ಥಿಕ ದೃಷ್ಟಿಯಿಂದ ಕೃಷ್ಣರಾಜಸಾಗರವು ಕರ್ನಾಟಕದ ಲ್ಪವೃಕ್ಷ. ಕಲಾದೃಷ್ಟಿಯಿಂದಲೂ ಅನುಪಮ–ಸುಂದರವಾದುದು. ಕಟ್ಟೆಯ ಕೆಳಗಡೆ ಒಂದು ಸುಂದರವಾದ ಬೃಂದಾವನವನ್ನು ರ್ಮಿಸಲಾಗಿದೆ. ಅನೇಕ ಬಣ್ಣಗಳಿಂದ ಕೂಡಿದ ಕಾರಂಜಿಗಳು ೃಂದಾವನದಲ್ಲಿ ಪ್ರತಿದಿನ ಸಾವಿರಾರು ಪ್ರೇಕ್ಷಕರನ್ನು ಆಕರ್ಷಿಸಿ ವರ ಕಣ್ಮನಗಳನ್ನು ತಣಿಸುತ್ತಿವೆ.

ಇದು ಕೇವಲ ನೀರಾವರಿ ಯೋಜನೆ ಮಾತ್ರವಲ್ಲ. ಜಲ ದ್ಯುತ್ ಶಕ್ತಿಯ ಉತ್ಪಾದನಾ ಕೇಂದ್ರವೂ ಆಗಿದೆ.

## ೧೪. ದಿವಾಣರಾಗಿ ವಿಶ್ವೇಶ್ವರಯ್ಯನವರು

ನವಂಬರ್ ೧೦, ೧೯೧೨ನೆಯ ದಿನ ವಿಶ್ವೇಶ್ವರಯ್ಯನವರು ೈಸೂರಿನ ದಿವಾಣರಾಗಿ ನೇಮಿಸಲ್ಪಟ್ಟರು. ಇಂಜಿನಿಯರರು ವಾಣರಾಗಿ ನೇಮಕಗೊಳ್ಳುವದನ್ನು ಕಂಡು ಅನೇಕರು ಹೊಟ್ಟೆ ಚ್ಚುಪಟ್ಟುಕೊಂಡರು: ಎಷ್ಟೋ ಪತ್ರಿಕೆಗಳಲ್ಲಿ ಟೀಕೆಗಳು ಕಂಡು ಂದವು. ದಿವಾಣ ಪದವಿಯು ಅವರಿಗೆ ಬಯಸದೆ ಬಂದ

ಭಾಗ್ಯವಾಗಿತ್ತು. ಮಹಾರಾಜರ ಒತ್ತಾಯದ ಮೇರೆಗೆ ಅದನ್ನ
ವರು ಅಂಗೀಕರಿಸಿ ದೇಶಾಭ್ಯುದಯದ ಕಾರ್ಯಗಳಲ್ಲಿ ನಿರ
ರಾದರು. ಜನತೆಗೆ ಶಿಕ್ಷಣ ಸೌಲಭ್ಯವನ್ನು ಕಲ್ಪಿಸಿಕೊಟ್ಟು
ತನ್ಮೂಲಕ ಜನ ಜಾಗೃತಿಯನ್ನುಂಟುಮಾಡಿ, ಕೈಗಾರಿಕೆಯಲ್ಲಿ
ಅಭಿವೃದ್ಧಿಯನ್ನು ಸಾಧಿಸಿ, ವಾಣಿಜ್ಯವನ್ನು ವೃದ್ಧಿಗೊಳಿಸ
ಬೇಕೆಂಬುದೇ ಅವರ ಹೆಗ್ಗುರಿಯಾಗಿತ್ತು.

ವಿಶ್ವೇಶ್ವರಯ್ಯನವರು ಆಂಗ್ಲರ ಜೊತೆಗೆ ವಾದ ಮಾಡಿ
ಗೆದ್ದು ಮಹಾರಾಜರಿಗೆ ಒಳಾಡಳಿತದಲ್ಲಿ ಪೂರ್ಣ ಸ್ವಾತಂತ್ರ್ಯ
ಲಭಿಸುವಂತೆ ಮಾಡಿದರು. ಇದರಿಂದ ಮಹಾರಾಜರ ಘನತೆ
ಗೌರವಗಳು ಹೆಚ್ಚಿದವು. ಇದಕ್ಕಾಗಿ ಮಹಾರಾಜರು ವಿಶ್ವೇಶ್ವರ
ಯ್ಯನವರಿಗೆ ಪತ್ರವೊಂದನ್ನು ಬರೆದು ತಮ್ಮ ಕೃತಜ್ಞತೆಗಳನ್ನು
ತಿಳಿಸಿದರು.

ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯವಿಧಾಯಕ ಸಭೆ
ಗಳಲ್ಲಿ ಸುಧಾರಣೆಗಳನ್ನು ಮಾಡಿ, ಸದಸ್ಯರ ಸಂಖ್ಯೆಯನ್ನು
ಹೆಚ್ಚಿಸಿ, ಆಯ–ವ್ಯಯ ಪಟ್ಟಿಯನ್ನು ಕನ್ನಡದಲ್ಲಿ ಪ್ರಕಟಿಸುವಂ
ಮಾಡಿ, ಅವುಗಳನ್ನು ಸದಸ್ಯರಿಗೆ ಒದಗಿಸುವ ವ್ಯವಸ್ಥೆಯನ್ನು
ಮಾಡಿದವರು ವಿಶ್ವೇಶ್ವರಯ್ಯನವರು. ಅವೇ ಇಂದಿನ ವಿಧಾ
ಸಭೆ ಮತ್ತು ವಿಧಾನ ಪರಿಷತ್ತುಗಳಾಗಿ ಶಾಸನಗಳನ್ನು ಮಾಡ
ತ್ತಿವೆ.

## ೧೪. ಮೈಸೂರು ವಿಶ್ವವಿದ್ಯಾನಿಲಯ

ಮೈಸೂರು ರಾಜ್ಯವು ಶಿಕ್ಷಣದಲ್ಲಿ ಹಿಂದೆ ಬಿದ್ದಿತ್ತು. ಲ್ಲರಿಗೂ ವಿದ್ಯೆ ದೊರಕಬೇಕೆಂಬ ಸಂಕಲ್ಪ ವಿಶ್ವೇಶ್ವರಯ್ಯನವರ ಾಗಿತ್ತು. ಅದಕ್ಕಾಗಿ ಅವರು ತಮ್ಮ ಅಧಿಕಾರಾವಧಿಯಲ್ಲಿ ಕ್ಷಣಕ್ಕೆ ಅಗ್ರಸ್ಥಾನ ಕಲ್ಪಿಸಿಕೊಟ್ಟರು. ಅವರ ಪರಿಶ್ರಮದ ಫಲ ಾಗಿ ಶಾಲೆಗಳ ಸಂಖ್ಯೆ ಒಂದಕ್ಕೆ ಮೂರರಷ್ಟಾಯಿತು; ಶಾಲಾ ಕ್ಕಳ ಸಂಖ್ಯೆ ಮುಮ್ಮಡಿಯಾಯಿತು. ಹೆಣ್ಣುಮಕ್ಕಳಿಗಾಗಿ ೖಸೂರಿನ ಮಹಾರಾಣಿ ಕಾಲೇಜನ್ನು ಪ್ರಥಮದರ್ಜೆಯ ಲೇಜನ್ನಾಗಿ ಪರಿವರ್ತಿಸಿದರು.

ಬೆಂಗಳೂರಿನಲ್ಲಿ ವ್ಯವಸಾಯ ಶಾಲೆ, ವಾಣಿಜ್ಯಶಾಲೆ. ಕ್ಯಾನಿಕಲ್ ಎಂಜಿನಿಯರಿಂಗ್ ಕಾಲೇಜು. ಹಾಗೂ ಜಿಲ್ಲೆಗೊಂದ ತೆ ಕೈಗಾರಿಕೆಯ ಶಾಲೆಗಳನ್ನು ತೆರೆದರು. ಪ್ರತಿಭಾವಂತ ದ್ಯಾರ್ಥಿಗಳನ್ನು ವಿದ್ಯಾರ್ಥಿವೇತನ ಕೊಟ್ಟು ಪರದೇಶಗಳಿಗೆ ನ್ನತ ವ್ಯಾಸಂಗಕ್ಕಾಗಿ ಕಳಿಸಿಕೊಡಲುಪಕ್ರಮಿಸಿದರು.

ಇಷ್ಟರಿಂದಲೇ ವಿಶ್ವೇಶ್ವರಯ್ಯನವರು ತೃಪ್ತಿಪಡಲಿಲ್ಲ. ದೇಶದ ವಿಶ್ವವಿದ್ಯಾನಿಲಯಗಳು ಅವರ ಕಣ್ಮುಂದೆ ನಿಂತವು. ೖಸೂರಿನಲ್ಲಿಯೂ ಒಂದು ವಿಶ್ವವಿದ್ಯಾನಿಲಯವನ್ನು ಸ್ಥಾಪಿ ವ ಕನಸು ಕಾಣತೊಡಗಿದರು. ಕಟ್ಟಮಂಚಿ ರಾಮಲಿಂಗರೆಡ್ಡಿ ತ್ತು ಥಾಮಸ್ ಡೆನ್‌ಹ್ಯಾಂ ಎಂಬವರನ್ನು ಜಪಾನ್. ಗ್ಲೆಂಡ, ಅಮೇರಿಕಾ ದೇಶಗಳಿಗೆ ಕಳಿಸಿ ಅಧ್ಯಯನ ಮಾಡಿ

ವರದಿ ಒಪ್ಪಿಸಲು ತಿಳಿಸಿದರು. ವರದಿ ಸಿದ್ಧವಾದ ಮೇಲೆ ಸಮಿತಿಯು ಅದನ್ನು ಭಾರತ ಸರಕಾರದ ಒಪ್ಪಿಗೆಗಾಗಿ ಕಳಿಸಿ ಕೊಟ್ಟಿತು. ಆಗಿನ ವೈಸರಾಯರಾಗಿದ್ದ ಲಾರ್ಡ್ ಹಾರ್ಡಿಂಜ್ ಅವರು ವಿಶ್ವವಿದ್ಯಾನಿಲಯದ ಸ್ಥಾಪನೆಗೆ ಒಪ್ಪಿಗೆಯನ್ನು ನೀಡಿ ದರು. ಆದರೆ ಮದರಾಸು ವಿಶ್ವವಿದ್ಯಾನಿಲಯದವರು ಇದಕ್ಕೆ ತಮ್ಮ ವಿರೋಧ ವ್ಯಕ್ತಮಾಡಿದರು. ವಿಚಾರ ವಿನಿಮಯಕ್ಕಾಗಿ ಮದರಾಸಿನ ಗೌರ್ನರರು ಊಟಿಯಲ್ಲಿ ಒಂದು ಸಭೆಯನ್ನು ಕರೆ ದರು. ಮದರಾಸಿನವರು ಮೈಸೂರಿಗೆ ಪ್ರತ್ಯೇಕ ವಿಶ್ವವಿದ್ಯಾ ಲಯ ಬೇಡವೆಂದರು. ವಿಶ್ವೇಶ್ವರಯ್ಯನವರು –"ಮಗಳು ಪ್ರಾಪ್ತವಯಸ್ಕಳಾಗಿ ತನ್ನ ಗೃಹ ನಿರ್ವಹಣೆಯ ಹೊಣೆಯನ್ನು ತಾನೇ ವಹಿಸಿಕೊಂಡರೆ, ತಾಯಿಯಾದವಳು ಅದಕ್ಕಡ್ಡಿಯನ್ನುಂಟು ಮಾಡುತ್ತಾಳೆಯೆ ?" ಎಂದು ಪ್ರಶ್ನಿಸಿದರು.

ಅದಕ್ಕೆ ಮದರಾಸಿನವರ – "ಮನೆಬಿಟ್ಟು ಓಡಿಹೋಗುವ ಮಗಳ ವಿಚಾರದಲ್ಲಿ ಕನಿಕರಪಟ್ಟು ಅವಳನ್ನು ಪ್ರೋತ್ಸಾಹಿಸ ಬೇಕಾದ ಹಂಗೇನೂ ಇಲ್ಲ" – ಎಂಬ ವ್ಯಂಗೋಕ್ತಿ ವಿಶ್ವೇಶ್ವರಯ್ಯ ನವರ ಮನಸ್ಸಿಗೆ ನೋವನ್ನುಂಟುಮಾಡಿತು. ಅದೇ ಕಾರಣ ದಿಂದಾಗಿ ಅವರ ಉತ್ಸಾಹ ಇಮ್ಮಡಿಯಾಗಿ ೧೯೧೬ನೇ ಜುಲೈ ಮೊದಲನೆಯ ತಾರೀಖಿನ ದಿನವೇ ಮೈಸೂರು ವಿಶ್ವವಿದ್ಯಾ ನಿಲಯವನ್ನು ಸ್ಥಾಪಿಸಿದರು. ಇಂದು ಅದೇ ಮಾನಸ ಗಂಗೋತ್ರಿಯೂ ಜ್ಞಾನಗಂಗೋತ್ರಿಯೂ ಆಗಿ ವಿಸ್ತಾರಗೊಂಡು ಸಾವಿರಾರು ಜನರ ಜ್ಞಾನತೃಷ್ಣೆಯನ್ನು ಹಿಂಗಿಸುತ್ತಿದೆ.

# ೧೫. ಭದ್ರಾವತಿಯ ಕಬ್ಬಿಣ-ಉಕ್ಕಿನ ಕಾರ್ಖಾನೆ

ಟಾಟಾ ಕಂಪನಿಯವರೂ, ಅಮೇರಿಕದ ಮಾರ್ಷಲ್ ಮತ್ತು ಪೆರಿನ್ ಕಂಪನಿಯವರೂ ಕೂಡಿ ಕಾರ್ಖಾನೆಯನ್ನು ಸ್ಥಾಪಿಸಲು ಒಪ್ಪಂದವನ್ನು ಮಾಡಿಕೊಂಡರು. ಈ ಕಾರ್ಖಾನೆಯ ಕೆಲಸ ೧೯೧೮ರಲ್ಲಿ ಆರಂಭವಾಯಿತು. ಮೊದಲನೆಯ ಮಹಾಯುದ್ಧದಿಂದಾಗಿ ಬೆಲೆಗಳೆಲ್ಲ ಇಳಿದುಹೋಗಿದ್ದವು. ಕಬ್ಬಿಣದ ಬೆಲೆಯೂ ಇಳಿಮುಖವಾಗಿತ್ತು. ಆದ್ದರಿಂದ ಮಾರ್ಷಲ್ ಕಂಪನಿಯವರು ಕಾರ್ಖಾನೆಯ ಕೆಲಸವನ್ನು ನಿಲ್ಲಿಸಬೇಕೆಂದರು. ಆಗ ಮಹಾರಾಜರು ದಿವಾಣ ಬ್ಯಾನರ್ಜಿಯವರನ್ನು ಮುಂಬಯಿಯಲ್ಲಿದ್ದ ವಿಶ್ವೇಶ್ವರಯ್ಯನವರಲ್ಲಿಗೆ ಕಳುಹಿಸಿ, ಅವರಿಗೆ ಕಾರ್ಖಾನೆಯ ಆಡಳಿತವನ್ನು ವಹಿಸಿಕೊಳ್ಳುವಂತೆ ತಿಳಿಸಿದರು. ಅವರು ಒಪ್ಪಿಕೊಂಡು ಒಂದು ಕಾರ್ಯಕಾರಿ ಮಂಡಳಿಯ ಸಹಾಯದಿಂದ ಕೆಲಸವನ್ನು ಮುಂದುವರಿಸಿಕೊಂಡು ಹೋದರು.

ಇವರ ಅಧಿಕಾರಾವಧಿಯಲ್ಲಿ ಅನೇಕರು ಕಾರ್ಖಾನೆಯನ್ನು ಐರಾವತವೆಂದು ಕರೆದರು. ಕಾರ್ಖಾನೆಗೆ ಸಾಕಷ್ಟು ಸೌದೆ ಬಾರದೆ ಕೆಲಸ ನಿಂತು ಹೋದುದೆ ಇದಕ್ಕೆ ಕಾರಣ. ಎಷ್ಟೋ ಜನರು ಇದನ್ನು ಟೀಕಿಸಿ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದು ಕಾರ್ಖಾನೆಯನ್ನು ಮುಚ್ಚಬೇಕೆಂದು ಒತ್ತಾಯಮಾಡಿದರು. ಆದರೆ ವಿಶ್ವೇಶ್ವರಯ್ಯನವರು ಧೃತಿಗೆಡಲಿಲ್ಲ.

ಇಲ್ಲಿ ತಯಾರಾದ ಉಕ್ಕನ್ನು ಅಮೇರಿಕೆಯ ಸಂಯುಕ್ತ ಸಂಸ್ಥಾನಗಳಿಗೆ ಒಯ್ದು ಅಗ್ಗ ದರದಲ್ಲಿ ಮಾರಿದರು. ಅವರು ಭಾರತದಿಂದ ೫ ಸಾವಿರ ಟನ್ನುಗಳಷ್ಟು ಕಬ್ಬಿಣ–ಉಕ್ಕನ್ನು ಆಯಾತಮಾಡಿಕೊಳ್ಳುವಂತೆ ವ್ಯವಸ್ಥೆ ಮಾಡಿದರು.

ಪ್ರಾರಂಭದಲ್ಲಿ ಈ ಕಾರ್ಖಾನೆಗೆ ತೊಡಗಿಸಿದ ಒಟ್ಟು ಹಣ ೫ ಕೋಟಿ ರೂಪಾಯಿಗಳು. ಈಗ ಇದು ಬೆಳೆದು ಹೆಮ್ಮರ ವಾಗಿದೆ. ಇಂದು ಸಾವಿರಾರು ಕುಟುಂಬಗಳು ಇದರ ಆಶ್ರಯದಲ್ಲಿ ತಮ್ಮ ನೆಮ್ಮದಿಯ ಜೀವನವನ್ನು ಸಾಗಿಸುತ್ತಿವೆ.

## ೧೬. ವಿಮಾನ ಕಾರ್ಖಾನೆ

ಏಷ್ಯಾ ಖಂಡದಲ್ಲಿಯೇ ಅತ್ಯಂತ ದೊಡ್ಡದಾದ ವಿಮಾನ ಕಾರ್ಖಾನೆ ಬೆಂಗಳೂರಿನಲ್ಲಿದೆ. ಇದರ ಸ್ಥಾಪನೆಗೆ ಶ್ರೀ ವಾಲ್ ಚಂದ್ ಹಿರಾಚಂದ್ ಮಹೋದಯರಿಗೆ ಪ್ರೇರಕಶಕ್ತಿಯನ್ನೊದ ಗಿಸಿದವರು ವಿಶ್ವೇಶ್ವರಯ್ಯನವರು. ವಾಲ್‌ಚಂದ್ ಹಿರಾ ಚಂದ್‌ರು ವಿದೇಶಿಯರ ಸಹಾಯದಿಂದ ವಿಮಾನ ಕಾರ್ಖಾನೆ ಯನ್ನು ಸ್ಥಾಪಿಸಲು ನಿರ್ಧರಿಸಿದರು. ಭಾರತ ಸರಕಾರದ ಅನು ಮತಿಗಾಗಿ ಬರೆದರು. ಸರಕಾರ ಏನನ್ನೂ ಹೇಳದೆ ಸುಮ್ಮ ನಾಯಿತು.

ಆಗ ಎರಡನೆಯ ಮಹಾಯುದ್ಧ ಪ್ರಾರಂಭವಾಗಿ ಅದರಲ್ಲಿ ಆಂಗ್ಲರು ಸೋಲುವ ಸ್ಥಿತಿಯಲ್ಲಿದ್ದರು. ಅವರಿಗೆ ಬೇಕಾದ

ಯುದ್ಧೋಪಕರಣಗಳು ಸಾಲದಾದವು. ಅವರು ಭಾರತದಲ್ಲಿಯೂ ತಮಗೆ ಬೇಕಾದ ಯಂತ್ರೋಪಕರಣಗಳನ್ನು ತಯಾರಿಸಲು ನಿರ್ಧರಿಸಿದರು. ಆಗ ವಾಲ್‌ಚಂದ್‌ರವರಿಗೆ ಬೆಂಗಳೂರಿನಲ್ಲಿ ವಿಮಾನ ಕಾರ್ಖಾನೆಯನ್ನು ಸ್ಥಾಪಿಸಲು ಭಾರತ ಸರಕಾರವು ಅನುಮತಿಯನ್ನಿತ್ತಿತು. ಅವರ ಕಾರ್ಯ ಸಫಲವಾಯಿತು.

## ೧೭. ಮೋಟಾರು ಕೈಗಾರಿಕೆ

ವಿಶ್ವೇಶ್ವರಯ್ಯನವರು ೧೯೩೫ರಲ್ಲಿ ಇಂಗ್ಲೆಂಡ್, ಅಮೇರಿಕಾ, ಮತ್ತು ಕೆನಡಾ ದೇಶಗಳಿಗೆ ಭೇಟಿಕೊಟ್ಟು. ಮೋಟಾರು ವಾಹನಗಳನ್ನು ತಯಾರಿಸುವ ಕುರಿತು ಅಧ್ಯಯನ ನಡೆಸಿದರು. ಭಾರತದಲ್ಲಿ ಈ ಕಾರ್ಖಾನೆಯನ್ನು ಸ್ಥಾಪಿಸಲುದ್ದೇಶಿಸಿ ಆಸ್ಟಿನ್ ಮತ್ತು ಫಿಯೆಟ್ ಕಾರ್ಖಾನೆಗಳಿಗೆ ಹೋಗಿ ಬಂದರು. ಫಿಯೆಟ್ ಕಾರ್ಖಾನೆಯಲ್ಲಿ ಬಿಡಿ ಭಾಗಗಳನ್ನು ಜೋಡಿಸಿ, ವಾಹನಗಳನ್ನು ತಯಾರಿಸುವ ಕೆಲಸ ಇವರನ್ನು ಮಂತ್ರಮುಗ್ಧರನ್ನಾಗಿಸಿತು. ಅನಂತರ ಫೋರ್ಡ ಕಾರ್ಖಾನೆಗೆ ಹೋಗಿ, ಒಂದು ಅಂದಾಜು ಪಟ್ಟಿಯನ್ನು ಮುಗಿಸಿಕೊಂಡು ಬಂದರು.

ಆದರೆ ಭಾರತದಲ್ಲಿ ಮೋಟಾರು ವಾಹನಗಳನ್ನು ತಯಾರಿಸಲು ಭಾರತ ಸರಕಾರವೇ ವಿರೋಧಮಾಡಿತು. ಬೆಂಗಳೂರಿನಲ್ಲಿ ಈ ಕಾರ್ಖಾನೆಯನ್ನು ಸ್ಥಾಪಿಸಲು ಆಲೋಚಿಸತೊಡಗಿದರು. ವಿಶ್ವೇಶ್ವರಯ್ಯನವರು. ಆಂಗ್ಲರು ಮಹಾರಾಜರ ಮನಸ್ಸನ್ನೂ

ಕಲುಷಿತಗೊಳಿಸಿ, ಕಾರ್ಖಾನೆ ಸ್ಥಾಪನೆಗೆ ಅಡ್ಡಿಯನ್ನುಂಟು ಮಾಡಿದರು. ಆದರೂ ವಿಶ್ವೇಶ್ವರಯ್ಯನವರು ತಮ್ಮ ಪ್ರಯತ್ನ ವನ್ನು ನಿಲ್ಲಿಸಲಿಲ್ಲ. ಭಾರತ ಸ್ವಾತಂತ್ರ್ಯಾನಂತರ ವಿಶ್ವೇಶ್ವರಯ್ಯ ನವರ ಆಸೆ ಫಲಿಸಿತು. ಶ್ರೀ ವಾಲ್‌ಚಂದ್ ಹಿರಾಚಂದರು ಕ್ರೈಸಲರ್ ಕಾರ್ಖಾನೆಯವರ ಸಹಾಯದಿಂದ ಮುಂಬಯಿಯಲ್ಲಿ ೧೯೪೪ರಲ್ಲಿ 'ಪ್ರೀಮಿಯರ್ ಆಟೋಮೊಬೈಲ್ ಕಂಪನಿ'ಯನ್ನು ಸ್ಥಾಪಿಸಿದರು.

## ೧೮. ಮೈಸೂರು ರೈಲ್ವೆ ಮತ್ತು ಭಟಕಳದ ಬಂದರು

ಮೈಸೂರು ರೈಲ್ವೆಯು ಕಂಪನಿಯ ಆಡಳಿತಕ್ಕೊಳಪಟ್ಟಿತ್ತು. ವಿಶ್ವೇಶ್ವರಯ್ಯನವರು ದಿವಾಣರಾದೊಡನೆ ಅದನ್ನು ಮೈಸೂರ ಸರಕಾರದ ವಶಕ್ಕೆ ತೆಗೆದುಕೊಳ್ಳಲು ಯತ್ನಮಾಡಿ, ಬೀರೂರು-ಶಿವಮೊಗ್ಗ, ಮೈಸೂರು-ನಂಜನಗೂಡು, ಬೆಂಗಳೂರು-ಮೈಸೂರು ರೇಲ್ವೆ ಆಡಳಿತವನ್ನು ಭಾರತ ಸರಕಾರದಿಂದ ವರ್ಗಾಯಿಸಿಕೊಂಡರು. ಸಂಸ್ಥಾನದಲ್ಲಿದ್ದ ४೧೧ ಮೈಲುಗಳ ರೈಲು ಮಾರ್ಗದ ಉದ್ದವು ಅವರ ಕಾಲದಲ್ಲಿ ೬೧೬ ಮೈಲುಗಳಾಯಿತು.

ಮೈಸೂರಿಗೆ ಒಂದು ಬಂದರಿನ ಅವಶ್ಯಕತೆ ಇತ್ತು. ಮಂಗಳೂರು ಬಂದರವು ವಿಶ್ವೇಶ್ವರಯ್ಯನವರಿಗೆ ಅಷ್ಟು ಉತ್ಕೃಷ್ಟ

ಾದುದೆಂದು ತೋರಲಿಲ್ಲ. ಇದುವರೆಗೂ ಮೈಸೂರಿನ ಹೊರ
ೇಶದ ವ್ಯಾಪಾರವು ಮುಂಬಯಿ ಮತ್ತು ಮದರಾಸು ಬಂದರು
ಳಿಂದ ನಡೆಯುತ್ತಿತ್ತು. ಭಟಕಳ ಬಂದರಿನಿಂದಲೂ ಅಲ್ಪ
ಲ್ಪ ವ್ಯಾಪಾರ ನಡೆಯುತ್ತಿತ್ತು. ಆದರೆ ಅಲ್ಲಿ ಬಂದ ಹಡಗು
ಳು ಒಂದು ಮೈಲು ದೂರದಲ್ಲಿ ನಿಲ್ಲುತ್ತಿದ್ದವು. ಹೀಗಾಗಿ
ರಕು ಸಾಗಿಸುವದು ಕಷ್ಟಸಾಧ್ಯವಾಗಿತ್ತು. ತೀರದಲ್ಲಿನ ಮಳ
ನ್ನು ತೆಗೆಯಿಸಿದರೆ ದೊಡ್ಡ ದೊಡ್ಡ ಹಡಗುಗಳೂ ಅಲ್ಲಿಗೆ
ರಬಹುದೆಂದೂಹಿಸಿದರು. ಅಲ್ಲಿಂದ ಎಲ್ಲ ದಿಕ್ಕುಗಳಿಗೂ ರೈಲು
ಾರ್ಗಗಳನ್ನು ಹಾಕಿಸಲು ಯೋಚಿಸಿದರು. ೧೯೧೮ರ ವೇಳೆಗೆ
ಈ ಯೋಜನೆಯನ್ನು ಸಿದ್ಧಗೊಳಿಸಿದರು. ಅದಕ್ಕೆ ತಗಲುವ
ಲ್ಲ ವೆಚ್ಚವನ್ನೂ, ಬರುವ ಆದಾಯವನ್ನೂ ಲೆಕ್ಕಹಾಕಿ ನೋಡಿ
ಾಗ ಯೋಜನೆಯು ಲಾಭದಾಯಕವಾಗಿ ಕಂಡಿತು. ಎಲ್ಲರೂ
ದನ್ನು ಪ್ರೋತ್ಸಾಹಿಸಿದರು. ಆದರೆ ಅವರು ಆಗಲೇ ದಿವಾಣ
ದವಿಯಿಂದ ನಿವೃತ್ತರಾದುದರಿಂದ ಅವರ ಈ ಯೋಜನೆಯು
ಾರ್ಯರೂಪಕ್ಕಿಳಿಯಲಿಲ್ಲ.

# ೧೯. ದಿವಾನ ಪದವಿಗೆ ರಾಜೀನಾಮೆ

ಮದರಾಸು ಪ್ರಾಂತದಲ್ಲಿ ೧೯೧೭–೧೭ರ ಸುಮಾರಿನಲ್ಲಿ ಬ್ರಾಹ್ಮಣ ಪಂಗಡದ ವಿರುದ್ಧ ಚಳವಳಿ ಪ್ರಾರಂಭವಾಯಿತು. ಬ್ರಾಹ್ಮಣರು ಸರಕಾರಿ ನೌಕರಿಗಳಲ್ಲಿ ಉನ್ನತ ಹುದ್ದೆಗಳಲ್ಲಿದ್ದುದೇ ಇದಕ್ಕೆ ಕಾರಣ. ಈ ಚಳವಳಿ ಕ್ರಮೇಣ ಮೈಸೂರಿಗೂ ಹಬ್ಬಿ ಹರಡಿತು.

ಬ್ರಾಹ್ಮಣೇತರರು ವಿದ್ಯಾಭ್ಯಾಸದಲ್ಲಿ ಹಿಂದುಳಿದಿದ್ದರು. ಅವರು ವಿದ್ಯಾವಂತರಾಗಲು ವಿಶ್ವೇಶ್ವರಯ್ಯನವರು ಅನೇಕ ವಿಶೇಷ ಕಾರ್ಯಕ್ರಮಗಳನ್ನು ಕೈಕೊಂಡರು. ಬ್ರಾಹ್ಮಣರು ಕಷ್ಟಪಟ್ಟು ವಿದ್ಯಾಭ್ಯಾಸಮಾಡಿ ಹೆಚ್ಚಿಗೆ ಗುಣಗಳನ್ನು ಗಳಿಸಿ ಸರಕಾರಿ ಹುದ್ದೆಗಳಲ್ಲಿ ಪ್ರಧಾನ ಸ್ಥಾನಗಳನ್ನು ದೊರಕಿಸುತ್ತಿದ್ದರು. ಇದು ಬ್ರಾಹ್ಮಣೇತರರಿಗೆ ಮತ್ಸರವನ್ನುಂಟುಮಾಡಿತು. ಮುಂದು ವರಿದ ಪಂಗಡವನ್ನು ಹಿಂದಕ್ಕೆ ದೂಡಬೇಕು; ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ನೀಡುವಾಗ ಅವರಿಗೆ ಪ್ರತಿಬಂಧಕಗಳನ್ನು ಹಾಕಬೇಕು; ಸರಕಾರಿ ನೌಕರಿಗಳಲ್ಲಿ ಅವರಿಗೆ ಹೆಚ್ಚಿನ ಹುದ್ದೆಗಳನ್ನು ಕೊಡ ಬಾರದೆಂದು ಅನೇಕರು ಅಪೇಕ್ಷೆಪಟ್ಟರು. ಆದರೆ ನಿಷ್ಪಕ್ಷಪಾತಿ ಗಳಾದ ವಿಶ್ವೇಶ್ವರಯ್ಯನವರಿಗೆ ಇದು ಸರಿದೋರಲಿಲ್ಲ. ತನ್ನ ಸ್ವಪ್ರಯತ್ನದಿಂದ ಮುಂದುವರಿಯುತ್ತಿರುವ ಪ್ರಜೆಯ ಒಂದು ವರ್ಗವನ್ನು ಹಿಂದಕ್ಕಟ್ಟುವದೆಂದರೆ ದೇಶದ ಪ್ರಗತಿಗೇ ಕೊಡಲಿ ಏಟು ಹಾಕಿದಂತೆ ಎಂದು ಹೇಳಿದರು.

ಆದರೆ ಶ್ರೀಮನ್ಮಹಾರಾಜರು ಹಿಂದುಳಿದ ಪಂಗಡಗಳ ನಾಯಕರ ಬಯಕೆಯನ್ನೀಡೇರಿಸಲು ಕಾತರರಾಗಿದ್ದರು. ಅವರು ಅಗಸ್ಟ ೨೩, ೧೯೧೮ ರಂದು ನ್ಯಾಯಾಧೀಶರಾಗಿದ್ದ ಸರ್. ಲೆಸ್ಲಿ ಮಿಲ್ಲರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿ, ಈ ಕೆಳಗಿನಂತೆ ಆಜ್ಞೆ ಮಾಡಿದರು.

೧. ಅಪೇಕ್ಷಕರನ್ನು ಸರಕಾರಿ ಹುದ್ದೆಗಳಲ್ಲಿ ಸೇರಿಸಿಕೊಳ್ಳ ಬೇಕಾದ ಸಂದರ್ಭಗಳಲ್ಲಿ ಈಗ ಆಚರಣೆಯಲ್ಲಿರುವ ಕೆಲವು ನಿಯಮಗಳನ್ನು ಅವಶ್ಯವೆನಿಸಿದರೆ ಬದಲಾಯಿಸಿರಿ.

೨. ನಿಮ್ನವರ್ಗದ ಜನರಿಗೆ ಪ್ರೌಢ ಶಿಕ್ಷಣ ಮತ್ತು ವೃತ್ತಿ ಶಿಕ್ಷಣ ಕೊಟ್ಟು, ಅವರಿಗೆ ಹೆಚ್ಚು ಪ್ರೋತ್ಸಾಹ ಮತ್ತು ಸೌಕರ್ಯ ನೀಡಲು ಸಲಹೆ ಮಾಡಿರಿ.

೩. ಸರಕಾರಿ ಉದ್ಯೋಗಾಧಿಕಾರ ಸ್ಥಾನಗಳಲ್ಲಿ ಹಿಂದುಳಿದ ಪಂಗಡಗಳ ಪ್ರತಿನಿಧಿಗಳಿಗೆ ಸಾಕಷ್ಟು ಅವಕಾಶ ಕೊಡಲು ಇತರ ವಿಶೇಷ ಕಾರ್ಯಕ್ರಮಗಳೇನಾದರೂ ಇದ್ದರೆ ಸೂಚನೆ ಮಾಡಿರಿ.

ಅದರಂತೆ ಸಮಿತಿಯವರು ತಮಗೆ ಬೇಕಾದ ಅಂಕಿ-ಅಂಶಗಳನ್ನು ಸಂಗ್ರಹಿಸಿ, ಸಂಸ್ಥಾನದ ಸಮಾಜವನ್ನೆಲ್ಲ ೧) ಬ್ರಾಹ್ಮಣರು, ೨) ಇತರ ಸವರ್ಣ ಹಿಂದುಗಳು, ಮುಸಲ್ಮಾನರು ೩) ಮತ್ತು ನಿಮ್ನ ವರ್ಗದವರು ಹೀಗೆ ಮೂರು ಪಂಗಡಗಳನ್ನಾಗಿ ವಿಂಗಡಿಸಿದರು.

ಸಂಸ್ಥಾನದ ಪ್ರಗತಿಯು ಎಲ್ಲೆಡೆಗೂ ಏಕರೀತಿಯುದಾಗಿರ ಬೇಕಾದರೆ, ಆಡಳಿತದಲ್ಲಿ ನೈಪುಣ್ಯತೆಯುಂಟಾಗಬೇಕಾದರೆ, ಉನ್ನತ ಹುದ್ದೆಗಳಲ್ಲೆಲ್ಲ ನಾನಾ ಪಂಗಡಗಳ ಅಧಿಕಾರಿಗಳಿರಬೇಕು. ಆಗ ಅಧಿಕಾರಿಗಳಲ್ಲಿ ಸಮಾನತೆಯ ಭಾವವುಂಟಾಗುತ್ತದೆ ಎಂದು ಸಮಿತಿಯು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿತು.

ಬ್ರಾಹ್ಮಣ ಪಂಗಡ ಬಿಟ್ಟು ವಿವಿಧ ಪಂಗಡಗಳ ಪ್ರತಿನಿಧಿ ಗಳನ್ನು ಉದ್ಯೋಗಗಳಿಗೆ ನೇಮಿಸುವದರಿಂದ ಆಡಳಿತದಲ್ಲಿ ಶೈಥಿಲ್ಯ ಉಂಟಾಗುವದಿಲ್ಲವೆಂದು ಸಮಿತಿಯು ಅಭಿಪ್ರಾಯಪಟ್ಟಿತು. ಆದರೆ ಈ ನೇಮಕಗಳನ್ನು ಒಮ್ಮೆಲೇ ಹೆಚ್ಚಿಸಲಿಕ್ಕಾಗದು. ಅದಕ್ಕಾಗಿ ಏಳು ವರ್ಷಗಳ ಕಾಲಾವಧಿಯನ್ನು ಕೊಡಬೇಕೆಂದು ಸಮಿತಿಯವರು ಸೂಚಿಸಿದರು.

ಕೊನೆಯದಾಗಿ ಸಮಿತಿಯವರು ಉನ್ನತ ಹುದ್ದೆಗಳಿ ಹಿಂದುಳಿದ ಪಂಗಡದವರು ಲಭ್ಯವಾಗದಿದ್ದರೆ ನೆರೆಯ ಪ್ರಾಂತ ಗಳಿಂದ ಅವರನ್ನು ಕರೆಯಿಸಿ, (ಅವರು ಮೈಸೂರು ಶಾಲಾ- ಕಾಲೇಜುಗಳಲ್ಲಿ ಓದಿದವರಾಗಿರಬೇಕು) ಅವರಿಗೆ ಉದ್ಯೋ ಗಳನ್ನು ಕೊಡಬಹುದೆಂದು ಸಲಹೆ ಮಾಡಿದರು. ಆದ ಸಮಿತಿಯ ಇಬ್ಬರು ಸದಸ್ಯರಾದ ಶ್ರೀ ಶ್ರೀಕಂಠೇಶ್ವರ ಅಯ್ಯರ ಮತ್ತು ಶ್ರೀ ಎಂ. ಸಿ. ರಂಗಯ್ಯಂಗಾರ್ ಈ ಸಲಹೆಯನ್ನು ವಿರೋಧಿಸಿ, ಸಮಿತಿಯನ್ನು ರಚಿಸಿದಾಗ ಸರಕಾರದವರು ಮಾಡಿ ಆಜ್ಞೆಯ ಮನೋಧರ್ಮಕ್ಕೆ ಇದು ವಿರುದ್ಧವಾಗಿದೆ ಎಂದರು.

ದೇಶದ ಏಳ್ಗೆಯನ್ನು ಬಯಸಿ ಅದನ್ನು ಸಾಧಿಸುವ ಏಕೈಕ ಉದ್ದೇಶವನ್ನು ಹೊಂದಿದ ವಿಶ್ವೇಶ್ವರಯ್ಯನವರಿಗೂ ಸಮಿತಿಯ ಶಿಫಾರಸುಗಳು ಸೇರಲಿಲ್ಲ. ಅವರು "ಮೇಧಾಶಕ್ತಿಯನ್ನೂ, ಯೋಗ್ಯತಾಸಿದ್ಧಿಯನ್ನೂ ಉಪೇಕ್ಷಿಸುವದರಿಂದ ಸಂಪತ್ಸೃಷ್ಟಿಗೆ ಅಡಚಣೆಯುಂಟಾಗುತ್ತದೆ: ಆಡಳಿತದಲ್ಲಿ ನೈಪುಣ್ಯತೆ ಶಿಥಿಲವಾಗುತ್ತದೆ: ಇದಕ್ಕಾಗಿ ನಾವೆಲ್ಲ ದುಡಿಯುತ್ತಿದ್ದೇವೆ: ಈ ಭಯವನ್ನು ನಾನು ವ್ಯಕ್ತಪಡಿಸಿದೆ. ಉದ್ಯೋಗಗಳಿಗೆ ಜನರನ್ನು ನೇಮಕ ಮಾಡುವಾಗ ಇಂತಹ ಒಂದು ಪಂಗಡಕ್ಕೆ ಪಕ್ಷಪಾತ ತೋರಿದ ಟೀಕೆ ದೂರೇ ಇರಲಿಲ್ಲ ನನ್ನ ಮೇಲೆ. ಇಷ್ಟಾದರೂ ಮಿಲ್ಲರ್ ಸಮಿತಿ' ನೇಮಕವನ್ನು ನಾನು ವಿರೋಧಿಸುವದು ಉಚಿತವೆಂದು ತಿಳಿದೆ"[೧]. ಎಂದು ಸ್ಪಷ್ಟವಾಗಿ ತಮ್ಮ ರಾಜೀನಾಮೆಗೆ ಕಾರಣವನ್ನು ಹೇಳಿದ್ದಾರೆ.

ಮಹಾರಾಜರ ಜೊತೆಗೆ ದೀರ್ಘಕಾಲ ವಿಚಾರವಿನಿಮಯವಾದ ನಂತರ ವಿಶ್ವೇಶ್ವರಯ್ಯನವರು ತಮ್ಮನ್ನು ಕೆಲಸದಿಂದ ನಿವೃತ್ತಿಗೊಳಿಸಲು ಕೇಳಿಕೊಂಡರು.ಡಿಸೆಂಬರ ೯, ೧೯೧೮ ರಂದು ಅವರು ದಿವಾನ ಪದವಿಯ ಅಧಿಕಾರದ ಜವಾಬ್ದಾರಿಯಿಂದ ಮುಕ್ತರಾದರು. ಅಂದು ಅವರು ಮಂತ್ರಿಗಳು, ಅಧಿಕಾರಿಗಳು, ಹಾಗೂ ಉದ್ಯೋಗಿಗಳನ್ನು ಸಭೆ ಸೇರಿಸಿ ಅವರಿಗೆಲ್ಲ ತಮ್ಮ ಕೃತಜ್ಞತೆಗಳನ್ನು ಹೇಳಿದರು.

---

೧. ಮೋಕ್ಷಗುಂಡಂ ಪು. ೧೧೫

ಆ ಸಮಯದಲ್ಲಿ ಅವರಾಡಿದ ಕೆಲವು ಮಾತುಗಳನ್ನಿಲ್ಲಿ ಉಲ್ಲೇಖಿಸುವದು ಉಚಿತವೆಂದು ತೋರುತ್ತಿದೆ.

"ಕೆಲವು ಕಡೆ, ಒಳಗೊಳಗೇ ನಾನು ಆ ಪಂಗಡದ ಪಕ್ಷಪಾತಿ ಈ ಪಂಗಡದ ವಿರೋಧಿ' ಎಂಬ ಪಿಸುಮಾತು ಕೇಳಿ ಬರುತ್ತಿದೆ. ನಾನು ನಿಷ್ಪಕ್ಷಪಾತದಿಂದ ನಡೆದುಕೊಂಡಿದ್ದೇನೆ......".

"ನನ್ನ ಆದರ್ಶಗಳನ್ನು ಸಾಧಿಸುವದರಲ್ಲಿ ನಾನು ಪರಾಜಿತನಾದೆನೆಂಬ ನೋವು ನನ್ನನ್ನು ಬಾಧಿಸುತ್ತಿದೆ. ಎಷ್ಟೋ ಸಾಧಿಸಬಹುದಾಗಿತ್ತು; ನಾನು ಸಾಧಿಸಲಿಲ್ಲ; ಅದಕ್ಕಾಗಿ ನನಗೆ ನಿರಾಶೆಯುಂಟಾಗಿದೆ.........".

ಈ ರೀತಿ ಭಾಷಣ ಮಾಡಿ, ಎಲ್ಲರಿಗೂ ಕೈಮುಗಿದು. ತಮ್ಮ ಸ್ವಂತ ಕಾರಿನಲ್ಲಿ ಕುಳಿತು, ಆಡಾರಾ ಕಚೇರಿಯನ್ನು ಬಿಟ್ಟು ಮನೆಗೆ ಮರಳುವಾಗ, ಅಲ್ಲಿ ನೆರೆದಿದ್ದವರೆಲ್ಲರ ಕಣ್ಣುಗಳೂ ಹನಿ ದುಂಬಿದವಂತೆ !

## ೨೦. ಆದರ್ಶ ವ್ಯಕ್ತಿತ್ವಕ್ಕೆ ನಿದರ್ಶನಗಳು

ವಿಶ್ವೇಶ್ವರಯ್ಯನವರು ಎಂತಹ ಆದರ್ಶ ಪುರುಷರಾಗಿದ್ದರೆಂಬುದಕ್ಕೆ ಕೆಲವು ನಿದರ್ಶನಗಳು ಇಲ್ಲಿವೆ :

**೧. ಆದರ್ಶ ಶಿಷ್ಯ :**

ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದ ಛಾರ್ಲ್ಸ್ ವಾಟರ್ಸ್‌ರವರು ನಿವೃತ್ತಿಯನ್ನು ಹೊಂದಿದ ಮೇಲೆ

ತಮ್ಮ ದೇಶಕ್ಕೆ ಹೋಗಿ, ಲಂಡನ್ ನಗರದಲ್ಲಿ ನೆಲೆಸಿದರು. ವಿಶ್ವೇಶ್ವರಯ್ಯನವರು ವಿದೇಶ ಪ್ರವಾಸ ಕೈಕೊಂಡಾಗಲೆಲ್ಲ ತಮ್ಮ ಗುರುಗಳಾದ ವಾಟರ್ಸ್‌ರವರನ್ನು ಕಂಡು, ಅವರ ಯೋಗಕ್ಷೇಮ ವನ್ನು ವಿಚಾರಿಸಿಕೊಂಡು ಬರುತ್ತಿದ್ದರು.

ವಾಟರ್ಸ್‌ರವರ ಕೊನೆಗಾಲ ಸಮೀಪಿಸಿದಾಗ ಅವರು ತಮ್ಮ ಪತ್ನಿಯನ್ನು ಕರೆದು, ತಮ್ಮ ಅಂಗಿಯ ಚಿನ್ನದ ಗುಂಡಿ ಗಳನ್ನು ಅವರ ಕೈಯಲ್ಲಿಟ್ಟು "ನೀನು ಭಾರತಕ್ಕೆ ಹೋಗಿ, ನನ್ನ ಮೆಚ್ಚಿನ ವಿದ್ಯಾರ್ಥಿ ವಿಶ್ವೇಶ್ವರಯ್ಯನವರಿಗೆ ಈ ಗುಂಡಿಗಳನ್ನು ಕೊಟ್ಟು ಬಾ" ಅಂದರಂತೆ. ಪತಿಯ ಇಚ್ಛೆಯನ್ನೀಡೇರಿಸಲು ಆ ಸತೀಮಣಿ ಭಾರತಕ್ಕೆ ಬಂದು ವಿಶ್ವೇಶ್ವರಯ್ಯನವರನ್ನು ಭೇಟಿ ಮಾಡಿ, ಚಿನ್ನದ ಗುಂಡಿಗಳನ್ನು ಕೊಟ್ಟರಂತೆ! ಇಂದು ಇಂಥ ಉದಾಹರಣೆಗಳು ನಮಗೆ ಎಷ್ಟು ಸಿಗಬಹುದು ?

## ೨. ಬಿಟ್ಟಿ ಸೇವೆ ಹಿಡಿಸುತ್ತಿರಲಿಲ್ಲ

ಒಮ್ಮೆ ವಿಶ್ವೇಶ್ವರಯ್ಯನವರು ಪ್ರವಾಸದಲ್ಲಿದ್ದಾಗ ಅವರ ಕೈಬೆರಳಿಗೆ ಸಣ್ಣ ಗಾಯವಾಗಿ ರಕ್ತ ಬಂದಿತು. ಅವರು ಕೂಡಲೆ ಆ ಊರಿನ ಆಸ್ಪತ್ರೆಗೆ ಹೋಗಿ ಡಾಕ್ಟರರಿಂದ ಚಿಕಿತ್ಸೆಯನ್ನು ಪಡೆದುಕೊಂಡು ಬಂದ ಮೇಲೆ ಅವರಿಗೆ ೨೫ ರೂಪಾಯಿಗಳ ಚೆಕ್ಕನ್ನು ಬರೆದು ಕಳಿಸಿದರು. ಡಾಕ್ಟರರು ಓಡಿ ಬಂದು "ಈ ಚೆಕ್ಕನ್ನು ನಾನು ತೆಗೆದುಕೊಳ್ಳಲಾರೆ. ತಮ್ಮ ಸೇವೆ ದೊರೆತದ್ದೇ ನನ್ನ ಭಾಗ್ಯ" ಅಂದರು. ಆಗ ವಿಶ್ವೇಶ್ವರಯ್ಯನವರು ಅವರಿಗೆ ತಿಳಿಹೇಳಿ ಆ ಚೆಕ್ಕನ್ನು ಅವರಿಗೆ ಕೊಟ್ಟು ಕಳುಹಿಸಿದರು. ಅವರು

ತಮ್ಮ ಕೈಕೆಳಗಿನವರಿಂದ ಎಂದೂ ಬಿಟ್ಟಿಯ ಸೇವೆಯನ್ನು ಅಪೇಕ್ಷಿಸುತ್ತಿರಲಿಲ್ಲವೆಂಬುದಕ್ಕೆ ಇದೊಂದು ನಿದರ್ಶನ

## ೩. ನಿಸ್ಪೃಹತೆಗೆ ನಿದರ್ಶನಗಳು

ವಿಶ್ವೇಶ್ವರಯ್ಯನವರು ದಿವಾಣರಾಗಿ ನೇಮಕಗೊಂಡ ವೇಳೆಯಲ್ಲಿ ಅವರಿಗೆ ಬಂದ ಆಜ್ಞಾಪತ್ರವನ್ನು ತಮ್ಮ ತಾಯಿಯ ಪದತಲದಲ್ಲಿಟ್ಟು ನಮಸ್ಕರಿಸಿ ಹೀಗೆ ಪ್ರಾರ್ಥನೆ ಮಾಡಿಕೊಂಡರಂತೆ: "ಅಮ್ಮ ನೀನು ನಮ್ಮ ನೆಂಟರಿಷ್ಟರಲ್ಲಿ ಯಾರಿಗೂ ನೌಕರಿ ಕೊಡಿಸೆಂದು ಶಿಫಾರಸು ಮಾಡಬಾರದು. ಹಾಗೆ ಮಾಡುವದಿಲ್ಲವೆಂದು ಮಾತುಕೊಟ್ಟರೆ ನಾನು ಈ ದಿವಾಣ ಪದವಿಯನ್ನು ಸ್ವೀಕರಿಸುತ್ತೇನೆ." ಮಾತೆಯಿಂದ ಆಶ್ವಾಸನೆ ದೊರೆತ ಮೇಲೆಯೇ ಅವರು ದಿವಾಣ ಪದವಿಯನ್ನು ಸ್ವೀಕರಿಸಿದರಂತೆ!

ಭದ್ರಾವತಿಯ ಕಬ್ಬಿಣದ ಕಾರ್ಖಾನೆಯ ಅಧ್ಯಕ್ಷರಾಗಿದ್ದಾಗ ತಮಗೆ ಸಂಭಾವನೆಯಾಗಿ ಬಂದ ಎರಡು ಲಕ್ಷ ರೂಪಾಯಿಗಳನ್ನು ಮಹಾರಾಜರ ಹೆಸರಿನಲ್ಲಿ ಔದ್ಯೋಗಿಕ ಶಾಲೆಯ ಸ್ಥಾಪನೆಗೆ ಕೊಟ್ಟರು ಎಂದು ಹೇಳಿದರೆ ಯಾರೂ ನಂಬಲಿಕ್ಕಿಲ್ಲ!

ವಿಶ್ವೇಶ್ವರಯ್ಯನವರು ವಿಶ್ರಾಂತರಾದ ಮೇಲೆ ಸರಕಾರಿ ಬಂಗಲೆ ಬಿಟ್ಟು ತಮಗೆ ಸ್ವಂತ ಮನೆಯಿಲ್ಲದೆ ಭಾಡಿಗೆ ಮನೆಯಲ್ಲಿರಲು ಅಪೇಕ್ಷೆಪಟ್ಟಿದ್ದನ್ನು ಕಂಡ 'ಡಿ. ವಿ. ಜಿ.'ಯವರು "ಸ್ವಾರ್ಥದ ಲೇಪವಿಲ್ಲದ ಪರಿಶುದ್ಧ ಜೀವನ ನಡೆಸಿದ ಈ ಪುಣ್ಯಾತ್ಮರನ್ನು ದಿನವೂ ಸ್ಮರಿಸಬೇಕು" ಎಂದು ಹೇಳಿದ್ದಾರೆ.[೪]

---

೪. ಕನ್ನಡ ಕಟ್ಟಿದವರು (ಪು. ೧೪)— ಕು. ಶಿ. ಹರಿದಾಸಭಟ್ಟ

## ೪. ಸ್ವಪ್ರತಿಷ್ಠೆ ಸೇರುತ್ತಿರಲಿಲ್ಲ

ಒಮ್ಮೆ ಅಧ್ಯಯನ ತಂಡವು ಅಮೇರಿಕೆಯ ಪ್ರವಾಸಕ್ಕೆ ಹೊರಟಿತ್ತು. ಆಗ ತಂಡದವರೆಲ್ಲರೂ ಸೌತ್‌ಹ್ಯಾಮ್‌ ಬಂದರಿನಲ್ಲಿ ಹಡಗನ್ನು ಹತ್ತುವದಕ್ಕೋಸ್ಕರ ಸಾಲಿನಲ್ಲಿ ಸುಮಾರು ಒಂದೂವರೆ ತಾಸು ನಿಲ್ಲಬೇಕಾಯಿತು. ಎಲ್ಲರೂ ತಮ್ಮ ತಮ್ಮ ಮೇಲಂಗಿ, ಕೊಡೆ, ಕ್ಯಾಮರಾ, ಕೈಚೀಲ ಮುಂತಾದವುಗಳನ್ನು ತಾವೇ ಹೊತ್ತು ನಿಂತಿದ್ದರು. ವಿಶ್ವೇಶ್ವರಯ್ಯನವರೂ ತಮ್ಮ ಎಲ್ಲ ಸಾಮಾನುಗಳನ್ನು ತಾವೇ ಹಿಡಿದುಕೊಂಡು ನಿಂತಿದ್ದರು. ಯಾರು ಬೇಡಿದರೂ ತಮ್ಮ ಸಾಮಾನುಗಳನ್ನು ಅವರಿವರ ಕೈಗೆ ಕೊಡಲಿಲ್ಲ. "ಎಲ್ಲರಂತೆ ನಾನೂ ಒಬ್ಬ, ನನಗೇಕೆ ಹೆಚ್ಚಿನ ಪುರಸ್ಕಾರ ?" ಎಂದು ಅಂದರಂತೆ. ಅವರಿಗೆ ಸ್ವಪ್ರತಿಷ್ಠೆ ಹಿಡಿಸುತ್ತಿರಲಿಲ್ಲವೆಂಬುದಕ್ಕೆ ಇದೊಂದು ಸೊಗಸಾದ ನಿದರ್ಶನ.

### ಶಿಸ್ತಿಗೆ ಹೆಸರಾದ ವ್ಯಕ್ತಿ :

"ಶುಭ್ರ ಜರಿಪೇಟ : ಮೇಧಾಕಿರೀಟ: ಶಾಂತರಸ :<br>
ಓರಣಕೆ ತೋರಣ ಕಟ್ಟಿದುಡುತೊಡುಗೆ, ನಡಿಗೆ :<br>
ನೂರು ಸಂವತ್ಸರದ ಕೊಡುಗೆ: ಕನ್ನಡ ಗುಡಿಗೆ"[೫]

ವಿಶ್ವೇಶ್ವರಯ್ಯನವರ ಶಿಸ್ತನ್ನು ಕುರಿತು ಶ್ರೀಮಾನ್ ಚೆನ್ನವೀರ ಕಣವಿಯವರು ಬರೆದ ಕವನದ ಕೆಲವು ಚರಣಗಳಿವು.

---

೫. ಚಿರಂತನ ದಾಹ (ಪು. ೧೧೦)— ಚೆನ್ನವೀರ ಕಣವಿ

ವಿಶ್ವೇಶ್ವರಯ್ಯನವರು ತಲೆಯ ಮೇಲೆ ಮೈಸೂರಿನ ಜರಿಯ ರುಮಾಲ (ಪೇಟ)ವನ್ನು ಧರಿಸುತ್ತಿದ್ದರು. ಕತ್ತಿನ ಕೆಳಗಿನ ಉಡುಪು ಮಾತ್ರ ಪಾಶ್ಚಾತ್ಯ ರೀತಿಯದು. ಅವರ ಕೋಟು, ಪ್ಯಾಂಟು, ರುಮಾಲು ಯಾವಾಗಲೂ ಶುಭ್ರವಾಗಿರುತ್ತಿದ್ದವು. ಯಾರಾದರೂ ಅವರನ್ನು ಕಾಣಬೇಕಾದರೆ, ಅಡಿಯಿಂದ ಮುಡಿಯವರೆಗೆ, ಇದೇ ರೀತಿಯ ಉಡುಗೆ–ತೊಡುಗೆಗಳಲ್ಲಿ ನೋಡಬೇಕು. ಅವರ ಬೂಟು, ಕತ್ತಿನ ಕಾಲರ್‌ಗಳು, ಬಟ್ಟೆಗಳು ಉತ್ಕೃಷ್ಟವಾಗಿರುತ್ತಿದ್ದವು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ಶಿಸ್ತಿಗೆ ಇನ್ನೊಂದು ಹೆಸರೇ ವಿಶ್ವೇಶ್ವರಯ್ಯ !

ಇಂಥ ಮಹನೀಯರಿಗೆ ಬಂದ ಬಿರುದಾವಳಿಗಳಿಗೆ ಕೊನೆ ಮೊದಲಿಲ್ಲ. ಅನೇಕ ವಿಶ್ವವಿದ್ಯಾಲಯಗಳು ಇವರಿಗೆ ಎಲ್‌ಎಲ್.ಡಿ. ಮತ್ತು ಡಿ.ಎಸ್‌ಸಿ. ಪದವಿಗಳನ್ನಿತ್ತು ಸನ್ಮಾನಿಸಿದವು. ಎಲ್ಲಕ್ಕೂ ಮಿಗಿಲಾಗಿ ಭಾರತ ಸರಕಾರವು ೧೯೫೫ರಲ್ಲಿ ಇವರ ಸೇವೆಯನ್ನು ಶ್ಲಾಘಿಸಿ, ಇವರಿಗೆ 'ಭಾರತ ರತ್ನ' ಪ್ರಶಸ್ತಿಯನ್ನು ಕೊಟ್ಟು, ಗೌರವಿಸಿತು.

## ೨೧. ಶತಮಾನೋತ್ಸವ

ಸಪ್ಟಂಬರ್ ೧೫, ೧೯೬೦ ರಂದು ವಿಶ್ವೇಶ್ವರಯ್ಯನವರ ಶತಮಾನೋತ್ಸವವನ್ನು ಆಚರಿಸಲಾಯಿತು. ಬೆಂಗಳೂರಿನ ಗಾಜಿನಮನೆಯಲ್ಲಿ ಅಂದು ಹಬ್ಬದ ವಾತಾವರಣ. ಶತಮಾನೋತ್ಸವದ ಉದ್ಘಾಟಕರಾಗಿ ಅಂದಿನ ಪ್ರಧಾನಿ ಜವಾಹರ ಲಾಲ ನೆಹರೂರವರು ಬೆಂಗಳೂರಿಗೆ ಆಗಮಿಸಿದ್ದರು. ಅವರು ರಾಜ್ಯಪಾಲರು ಮತ್ತು ಮುಖ್ಯಮಂತ್ರಿಗಳೊಡಗೂಡಿ ಗಾಜಿನ ಮನೆಗೆ ಬಂದರು. ಶತಾಯುಷಿ ವಿಶ್ವೇಶ್ವರಯ್ಯನವರ ಮನೆಗೆ ಅವರನ್ನು ಅಭಿನಂದಿಸಲು ಜನ ಬರುತ್ತಿದ್ದುದರಿಂದ ಅವರು ಸಭೆಗೆ ೨೫ ನಿಮಿಷ ತಡವಾಗಿ ಬಂದರು. ಪ್ರಧಾನಿಯವರಿಗೆ ಪೂರ್ಣಕುಂಭದ ಸ್ವಾಗತ ನೀಡಿದಂತೆ ವಿಶ್ವೇಶ್ವರಯ್ಯನವರಿಗೂ ನೀಡಲಾಯಿತು. ಮೈಸೂರಿನ ರಾಜ್ಯಪಾಲ, ಶ್ರೀ ಜಯಚಾಮ ರಾಜ ಒಡೆಯರ್ ಅವರ ಅಧ್ಯಕ್ಷತೆಯಲ್ಲಿ ದೇವತಾ ಪ್ರಾರ್ಥನೆಯೊಂದಿಗೆ ಸಭೆಯ ಕಾರ್ಯಕಲಾಪಗಳು ಪ್ರಾರಂಭವಾದವು.

ಶ್ರೀ ಎಸ್. ನಿಜಲಿಂಗಪ್ಪನವರು, "ಕೆಲವರಿಗೆ ಮಾತ್ರವೇ ನೂರು ವರ್ಷ ಬಾಳುವ ಭಾಗ್ಯವಿರುತ್ತದೆ......... ಡಾ. ಎಂ. ವಿಶ್ವೇಶ್ವರಯ್ಯನವರು ಇಂಥ ಕೆಲವೇ ಮಂದಿಯಲ್ಲಿ ಒಬ್ಬರು" ಎಂದು ಹೇಳಿ, ಶತಮಾನೋತ್ಸವ ಸಮಿತಿಯ ಪರವಾಗಿ ಶತಾಯುಷಿಯನ್ನು ಸ್ವಾಗತಿಸಿದರು.

ಪ್ರಧಾನಿ ನೆಹರೂ ಅವರು ಶತಮಾನೋತ್ಸವದ ಉದ್ಘಾಟನೆ ಮಾಡುತ್ತ "ನಿಮ್ಮದು ಕನಸುಗಳ ಹಾಗೂ ಸಾಧನೆಗಳ ತುಂಬು ಜೀವನ...... ನಿಮಗೆ ವಯಸ್ಸಾಗಿದ್ದರೂ ನೀವು ಮನಸ್ಸಿನಲ್ಲಿ, ಮನೋದೃಷ್ಟಿಯಲ್ಲಿ ಯುವಕರು. ನಿಮ್ಮ ಆದರ್ಶಗಳನ್ನು ಮುಂದಿನ ಜನಾಂಗದವರು ಅನುಸರಿಸಿದರೆ ನಮ್ಮ ಮಾತೃಭೂಮಿಯಲ್ಲಿ ಎಲ್ಲವೂ ನೆಮ್ಮದಿಯಿಂದಿರುತ್ತದೆ." ಎಂದು ಹೇಳಿ ಅವರ ಕಾರ್ಯಸಾಧನೆಗಳನ್ನು ಶ್ಲಾಘಿಸಿದರು.

ಅನಂತರ ಅಂದಿನ ಮುಖ್ಯಮಂತ್ರಿಯಾಗಿದ್ದ ಶ್ರೀಮಾನ್ ಬಿ. ಡಿ. ಜತ್ತಿಯವರು ಮಾತನಾಡಿ, ಭಾರತಕ್ಕೆ ಯೋಜನಾಬದ್ಧವಾದ ಆರ್ಥಿಕ ವ್ಯವಸ್ಥೆ ಅಗತ್ಯವೆಂದು ಪ್ರತಿಪಾದಿಸಿದವರಲ್ಲಿ ಡಾ॥ ವಿಶ್ವೇಶ್ವರಯ್ಯನವರೇ ಮೊದಲಿಗರು" ಎಂದು ಹೇಳಿ ಅವರಿಗೆ ಶುಭವನ್ನು ಕೋರಿದರು.

ಆಮೇಲೆ ಡಾ॥ ಎಸ್. ರಾಧಾಕೃಷ್ಣನ್‌ರವರು ಭಾಷಣ ಮಾಡಿ ವಿಶ್ವೇಶ್ವರಯ್ಯನವರಿಗೆ ತಮ್ಮ ಕೃತಜ್ಞತೆಗಳನ್ನು ಸಲ್ಲಿಸಿದರು.

ಶ್ರೀ ಜಯಚಾಮರಾಜ ಒಡೆಯರ್ ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ, "ರಾಷ್ಟ್ರ ನಿರ್ಮಾಣ ಮತ್ತು ತಾಂತ್ರಿಕ ಅಭಿವೃದ್ಧಿಗೆ ಸಂಬಂಧಿಸಿದಂತೆ ಅವರು ಗಮನಾರ್ಹವಾದ ಕಾಣಿಕೆ ಸಲ್ಲಿಸಿದ್ದಾರೆ. ಎಲ್ಲ ಕ್ಷೇತ್ರಗಳಲ್ಲಿ ನಮ್ಮ ದೇಶದ ಹಲವೆಡೆಗಳಲ್ಲಿ ಅವರ ಕಾರ್ಯ ವಿಚಕ್ಷಣತೆಯ ಗುರುತಿದೆ" ಎಂದು ಹೇಳಿ ವಿಶ್ವೇಶ್ವರಯ್ಯನವರ ಗುಣಗಾನಮಾಡಿದರು.

ಭಾಷಣಕಾರರೆಲ್ಲರಾಡಿದ ಮಾತುಗಳನ್ನು ಕೇಳಿ ವಿಶ್ವೇಶ್ವರಯ್ಯನವರು "Thank you very much" (ನಿಮಗೆಲ್ಲ ತುಂಬಾ ಕೃತಜ್ಞತೆಗಳು) ಎಂದು ಹೇಳಿ ಮೌನ ತಾಳಿದರು. ಅವರು ಮತ್ತೇನನ್ನೂ ಮಾತನಾಡಲಿಲ್ಲ. ಅವರ ಮೌನವೇ ಅಂದಿನ ಸಭೆಗೆ ವಿಶೇಷ ಕಳೆ ತಂದುಕೊಟ್ಟಿತು. ಕಾರ್ಯದರ್ಶಿಗಳಿಂದ ವಂದನಾರ್ಪಣೆಯಾದ ಮೇಲೆ ರಾಷ್ಟ್ರಗೀತೆಯೊಂದಿಗೆ ಸಮಾರಂಭ ಕೊನೆಗೊಂಡಿತು. ಧೈರ್ಯ, ಸಾಹಸ ಮತ್ತು ಬುದ್ಧಿಶಕ್ತಿಗಳು ಮುಪ್ಪುರಿಗೊಂಡ ಆ ಶತಾಯುಷಿಗೆ ಅತ್ಯಮೂಲ್ಯ ಗೌರವ ಸಂದಿತು ಅಂದು !

## ೨೨. ಅವಸಾನ

ವಿಶ್ವೇಶ್ವರಯ್ಯನವರು ೧೯೬೨ರ ಎಪ್ರಿಲ್ ೧೪ನೇ ದಿನ ಕೊನೆಯುಸಿರನ್ನೆಳೆದರು. ಅಂದು ಕರ್ನಾಟಕದ ಇತಿಹಾಸದಲ್ಲಿ ದುಃಖದ ದಿನ ! ಕನ್ನಡಮ್ಮ ತನ್ನ ಪುತ್ರರತ್ನರನ್ನು ಕಳೆದುಕೊಂಡು ವ್ಯಥೆಪಟ್ಟಳು.

ಆಕಾಶವಾಣಿ ದೆಹಲಿ ಕೇಂದ್ರದಿಂದ ಮುಂಜಾನೆ ೭–೪೫ಕ್ಕೆ ಕನ್ನಡದಲ್ಲಿಯೂ, ೮ ಘಂಟೆಗೆ ಇಂಗ್ಲೀಷಿನಲ್ಲಿಯೂ ವಿಶ್ವೇಶ್ವರಯ್ಯನವರ ಸಾವಿನ ಸುದ್ದಿಯನ್ನು ಬಿತ್ತರಿಸಲಾಯಿತು.

ದೇಶದ ಜನರಿಗೆ ಭರಿಸಲಾರದಷ್ಟು ದುಃಖವಾಯಿತು. ವಿಶ್ವೇಶ್ವರಯ್ಯನವರ ಸಹೋದರರ ಪುತ್ರ ಎಂ. ಆರ್. ಶ್ರೀನಿವಾಸ ಮೂರ್ತಿಯವರು ರೇಡಿಯೋ ವಾರ್ತೆ ಕೇಳಿ ಕಲಕತ್ತಾದಿಂದ ವಿಮಾನದಲ್ಲಿ ಬೆಂಗಳೂರಿಗಾಗಮಿಸಿ ಅಂತ್ಯಕ್ರಿಯೆಯಲ್ಲಿ ಪಾಲುಗೊಂಡರು.

ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ಎಸ್. ಆರ್. ಕಂಠಿಯವರು ಅಲ್ಲಿಗೆ ಬಂದು ಕಳೇಬರಕ್ಕೆ ತಮ್ಮ ಕೊನೆಯ ಗೌರವವನ್ನು ಸೂಚಿಸಿ, ಅವರ ಅಪ್ರತಿಮ ಸೇವೆಯನ್ನು ಶ್ಲಾಘಿಸಿ ತಮ್ಮ ಶ್ರದ್ಧಾಂಜಲಿಗಳನ್ನರ್ಪಿಸಿದರು.

ರಾಜ್ಯಪಾಲ ಶ್ರೀ ಜಯಚಾಮರಾಜ ಒಡೆಯರ್, ಮಾಜೀ ದಿವಾನ ಮಾಧವರಾಯರು, ಖ್ಯಾತ ಸಾಹಿತಿ ಶ್ರೀ ಡಿ. ವಿ. ಜಿ.' ಅವರು, ರಾಷ್ಟ್ರಪತಿ ರಾಜೇಂದ್ರ ಪ್ರಸಾದರು ಮತ್ತು ಪ್ರಧಾನಿ ಜವಾಹರಲಾಲ ನೆಹರೂ ಮುಂತಾದ ಅಗ್ರಗಣ್ಯರು ವಿಶ್ವೇಶ್ವರಯ್ಯನವರ ಅದ್ವಿತೀಯ ಕಾರ್ಯಸಾಧನೆಗಳನ್ನು ಪ್ರಶಂಸಿಸಿ ತಮ್ಮ ಸಂತಾಪವನ್ನು ಸೂಚಿಸಿದರು.

ವಿಶ್ವೇಶ್ವರಯ್ಯನವರು ತಮ್ಮ ಹುಟ್ಟೂರಾದ ಮುದ್ದೇನಹಳ್ಳಿಯಲ್ಲಿಯೇ ಅಂತ್ಯಸಂಸ್ಕಾರವಾಗಬೇಕೆಂದು ಬಯಸಿದ್ದರು. ಅವರ ಇಚ್ಛೆಯಂತೆ ಪಾರ್ಥಿವ ಶರೀರವನ್ನು ಮುದ್ದೇನಹಳ್ಳಿಗೆ ತೆಗೆದುಕೊಂಡು ಹೋಗುವ ಏರ್ಪಾಡು ಮಾಡಿದರು. ಬೆಂಗಳೂರಿನ ಪ್ರಮುಖ ಬೀದಿಗಳಲ್ಲಿ ಹಾಯ್ದು ಅವರ ಕಳೇಬರವನ್ನು ಹೊತ್ತ ವಾಹನವು ಮುದ್ದೇನಹಳ್ಳಿಗೆ ಹೋಯಿತು. ರಾತ್ರಿ